# ಬೆಳಗಾವಿ ನಗರದ ಮುಸ್ಲಿಂ ಸ್ಮಾರಕಗಳು

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಸಂಪ್ರಬಂಧ

ಸಂಶೋಧಕರು
ವಿಠ್ಠಲ ಕೋಳಿ

ಮಾರ್ಗದರ್ಶಕರು
ರಮೇಶ ನಾಯಕ
ಸಹ ಪ್ರಾಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ
ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೧೪

# ಬೆಳಗಾವಿ ನಗರದ ಮುಸ್ಲಿಂ ಸ್ಮಾರಕಗಳು

(ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕರು
**ವಿಠ್ಠಲ ಕೋಳಿ**

ಮಾರ್ಗದರ್ಶಕರು
**ರಮೇಶ ನಾಯಕ**
ಸಹ ಪ್ರಾಧ್ಯಾಪಕರು




ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೪

## ಮಾರ್ಗದರ್ಶಕರ ಪ್ರಮಾಣ ಪತ್ರ

**ಬೆಳಗಾವಿ ನಗರದ ಮುಸ್ಲಿಂ ಸ್ಮಾರಕಗಳು** ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ **ವಿಠ್ಠಲ ಕೋಳಿ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲ ವೆಂದು ದೃಢೀಕರಿಸುತ್ತೇನೆ.

R Nayk

**ರಮೇಶ ನಾಯಕ**
ಮಾರ್ಗದರ್ಶಕರು
ಪ್ರಾಚೀನ ಇತಿಹಾಸ ಮತ್ತು
ಪುರಾತತ್ವ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ: 30/6/2014

# ಘೋಷಣಾ ಪತ್ರ

**ಬೆಳಗಾವಿ ನಗರದ ಮುಸ್ಲಿಂ ಸ್ಮಾರಕಗಳು** ಎಂಬ ಸಂಪ್ರಬಂಧವನ್ನು **ರಮೇಶ ನಾಯಕ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿದ್ದೇನೆ. ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

**ವಿಠ್ಠಲ ಕೋಳಿ**
ಸಂಶೋಧಕರು
ಪ್ರಾಚೀನ ಇತಿಹಾಸ ಮತ್ತು
ಪುರಾತತ್ವ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ: 30/6/2014

## ಪರಿವಿಡಿ

# ಅಧ್ಯಾಯ ಒಂದು

## ಪ್ರಸ್ತಾವನೆ

ಕರ್ನಾಟಕದ ಸಂಸ್ಕೃತಿಯನ್ನು ರೂಪಿಸಿದ ಕೆಲವು ಪ್ರಮುಖ ಪಟ್ಟಣಗಳಲ್ಲಿ ಬೆಳಗಾವಿ ನಗರವು ಒಂದು. ಇದು ಮೋಹಕವಾದ ಪ್ರಾಕೃತಿಕ ರಚನೆ, ಹಿತಕರವಾದ ಹವಾಮಾನ, ಭಿನ್ನಬಗೆಯ ಸಂಸ್ಕೃತಿಯ ಹಿನ್ನೆಲೆ ಒಳಗೊಂಡ ಪ್ರದೇಶವಾಗಿದೆ. ಕರ್ನಾಟಕದ ಗಡಿಭಾಗವಾಗಿರುವ ಈ ನಗರವು ಗೋವಾ, ಕರ್ನಾಟಕ, ಮಹಾರಾಷ್ಟ್ರ ರಾಜ್ಯಗಳ ಪ್ರಭಾವದಿಂದ ರೂಪಗೊಂಡಿರುವುದು ಹಾಗಾಗಿ ಇದು ಬಹು ಸಂಸ್ಕೃತಿ ಹೊಂದಿದ ನೆಲೆಬೀಡಾಗಿ ತೋರುತ್ತದೆ. ಬೆಳಗಾವಿ ನಗರದಲ್ಲಿ ಹಿಂದೂ, ಮುಸ್ಲಿಂ, ಕ್ರೈಸ್ತ್, ಜೈನ್, ಪಾರ್ಸಿ ಮತ್ತು ಬೌದ್ಧ ಮತಗಳಿಂದ ರೂಪಗೊಂಡ ಸಮುದಾಯಗಳಿವೆ. ಹಾಗಾಗಿ ಮತ ಪಂಥಗಳ ಚಟುವಟಿಕೆಗಳ ಕೇಂದ್ರಗಳಾಗಿ ಪರಿಣಮಿಸಿವೆ. ತಮ್ಮದೇ ಆದ ತತ್ವ ಸಿದ್ಧಾಂತಗಳ ಹಿನ್ನಲೆಯಲ್ಲಿ ಆಯಾ ಮತ ಪಂಥಗಳಿಗೆ ಸೇರಿದ ಹಲವಾರು ಧಾರ್ಮಿಕ ಮತ್ತು ಧಾರ್ಮಿಕೇತರ ಸ್ಮಾರಕಗಳು ಇಲ್ಲಿ ಕಂಡು ಬಂದಿವೆ.

ಈ ಸ್ಮಾರಕಗಳು ಜನಾಂಗದ ಐಕ್ಯತೆಗೆ ಪ್ರಮುಖ ಪಾತ್ರ ವಹಿಸುತ್ತವೆ. ದೇವಾಲಯಗಳು, ಚರ್ಚಗಳು ಮಸೀದಿಗಳು, ದರ್ಗಾಗಳು, ಪ್ರಾರ್ಥನಾ ಮಂದಿರಗಳು ಪ್ರಮುಖವಾಗಿವೆ. ಇದರೊಂದಿಗೆ ತಮ್ಮ ಅವಶ್ಯಕತೆ ಅನುಸಾರವಾಗಿ ಧಾರ್ಮಿಕೇತರ ಕಟ್ಟಡಗಳಾದ ಕೋಟೆ, ಅರಮನೆ, ಕಛೇರಿ, ಮಹಲ್, ಮನೆಗಳು ರಚನೆಯಾಗಿವೆ. ಹೀಗೆ ಒಂದು ನೆಲೆಗಟ್ಟಿನಲ್ಲಿ ಸು ೧೩ ನೇ ಶತಮಾನದಿಂದ ೧೭ ನೇ ಶತಮಾನದವರೆಗೆ ಬೆಳಗಾವಿ ನಗರವನ್ನು ಆಳಿದ ದೆಹಲಿ ಸುಲ್ತಾನರು, ಬಹುಮನಿಗಳು, ಆದಿಲ್ ಷಾಹಿಗಳು, ಸವಣೂರಿನ ನವಾಬರು, ಈ ನಗರವನ್ನು ತಮ್ಮ ಆಡಳಿತದ ಒಂದು ಭಾಗವಾಗಿ ಮಾಡಿಕೊಂಡು ಇಲ್ಲಿ ಹಲವಾರು ಸ್ಮಾರಕಗಳನ್ನು ವಿವಿಧ ಶೈಲಿಗಳನ್ನು ಅನುಸರಿಸಿ ನಿರ್ಮಾಣಮಾಡಿದ್ದಾರೆ. ಇಲ್ಲಿರುವ ಮುಸ್ಲಿಂ ಸ್ಮಾರಕಗಳ ರಚನೆಯಲ್ಲಿ ಸುಲ್ತಾನರು ತಮ್ಮದೆ ಆದ ವಾಸ್ತುಶೈಲಿಗಳನ್ನು ಬಳಸಿ ಕಟ್ಟಡಗಳನ್ನು ನಿರ್ಮಾಣ ಮಾಡಿದ್ದಾರೆ. ಅವು ಪರ್ಷಿಯನ್, ಇಂಡೋ–ಇಸ್ಲಾಮಿಕ್, ಮೊಘಲ್ ಮತ್ತು ದಖ್ಖನ್.

ವಿಜಾಪುರ ಶೈಲಿಯನ್ನು ಅಳವಡಿಸಿಕೊಂಡು ರಚನೆಯಾಗಿರುವ ಸ್ಮಾರಕಗಳಾಗಿವೆ. ಕೆಲವು ಸ್ಮಾರಕಗಳಲ್ಲಿ ಸ್ಥಳೀಯ ಲಕ್ಷಣಗಳು ಪ್ರಭಾವಿಸಿವೆ. ಇತ್ತೀಚಿಗೆ ರಚನೆಯಾದ ಕಟ್ಟಡಗಳು ಆಧುನಿಕ ಮುಸ್ಲಿಂ ವಾಸ್ತುಶೈಲಿಯಿಂದ ಪ್ರಭಾವಿತಗೊಂಡಿವೆ. ಅವು ಮೂಲ ಸ್ವರೂಪದಿಂದ ಭಿನ್ನವಾಗಿವೆ.

ಈ ನಗರದಲ್ಲಿ ನಿರ್ಮಾಣವಾಗಿರುವ ಮುಸ್ಲಿಂ ಸ್ಮಾರಕಗಳು ಬಹು ವೈವಿಧ್ಯ ಸಂಸ್ಕೃತಿಯನ್ನು ರೂಪಿಸುವಲ್ಲಿ ಯಶಸ್ವಿಯಾಗಿವೆ. ಅಲ್ಲದೇ ಅವುಗಳು ಧಾರ್ಮಿಕೇತರ ಚಟುವಟಿಕೆಗಳ ಕೇಂದ್ರಗಳಾಗಿಯೂ ಕಾರ್ಯನಿರ್ವಹಿಸುತ್ತಿವೆ. ಉದಾ; ಶಿಕ್ಷಣ, ಸಮಾಜ ಸೇವೆ ಹಾಗೂ ಬ್ಯಾಂಕಿಂಗ್ ವ್ಯವಸ್ಥೆಯನ್ನು ನಿರ್ವಹಿಸುವ ಕೆಲಸವನ್ನು ಮಾಡುತ್ತವೆ. ಇಲ್ಲಿರುವ ಮುಸ್ಲಿಂ ಸಮುದಾಯವು ಧಾರ್ಮಿಕ ಸಭೆ ಸಮಾರಂಭಗಳು, ಮನರಂಜನೆ, ವಾರ್ಷಿಕೋತ್ಸವ ಹಾಗೂ ಇಸ್ಲಾಂ ಧರ್ಮದ ಪ್ರಮುಖ ಹಬ್ಬಗಳಾದ ರಂಜಾನ್, ಮೊಹರಂ, ಬಕ್ರಿದ್, ಉರುಸ್‌ಗಳನ್ನು ಸಂಭ್ರಮದಿಂದ ಆಚರಿಸುತ್ತಾರೆ. ಇಸ್ಲಾಂತೇರ ಧರ್ಮದವರಿಗೂ ಅವರ ಹಬ್ಬ ಉತ್ಸವಗಳ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಮುಕ್ತ ಅವಕಾಶವಿರುತ್ತದೆ. ಎಲ್ಲ ಧರ್ಮಗಳ ತಿರುಳು ಸರ್ವಧರ್ಮ ಸಮನ್ವಯತೆಯನ್ನು ಸಾಧಿಸುವುದಾಗಿದೆ. ಇಂತಹ ಸ್ಮಾರಕಗಳು ಆಧುನಿಕತೆಯ ಪ್ರಭಾವದಿಂದ ನಿರ್ಲಕ್ಷಕ್ಕೆ ಒಳಗಾಗಿ ಹಾಳಾಗುತ್ತಿವೆ. ಹಾಗೂ ಇನ್ನೂ ಕೆಲವು ಪ್ರಾಕೃತಿಕ ವಿಕೋಪಕ್ಕೆ ಸಿಲುಕಿ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುವ ಸ್ಥಿತಿಯಲ್ಲಿವೆ. ಜನ ಸಾಮಾನ್ಯರಿಗೆ ಈ ಸ್ಮಾರಕಗಳ ಸಂರಕ್ಷಣೆ ಕುರಿತು ಜಾಗೃತಿ ಮೂಡಿಸುವ ಚಟುವಟಿಕೆಗಳು ರೂಪಗೊಳ್ಳಬೇಕಾದ ಅವಶ್ಯಕತೆಗಳಿವೆ. ಈ ನಗರದಲ್ಲಿಯ ಮುಸ್ಲಿಂ ಸ್ಮಾರಕಗಳ ಇತಿಹಾಸ, ಅವುಗಳ ನಿರ್ಮಾಣ ಉದ್ದೇಶಗಳು ಹಾಗೂ ಅಲ್ಲಿರುವ ಸಾಂಸ್ಕೃತಿಕ ಆಯಾಮಗಳನ್ನು ವಿಶ್ಲೇಷಿಸುವ ವಿವರಿಸುವ ಮತ್ತು ಅರ್ಥೈಸುವ ಅವಶ್ಯಕತೆ ಹಿನ್ನಲೆಯಲ್ಲಿ ಪ್ರಸ್ತುತ ಸಂಶೋಧನಾ ಪ್ರಬಂಧದಲ್ಲಿ ಪೂರೈಸುವ ಪ್ರಯತ್ನ ಮಾಡಲಾಗಿದೆ. ಈ ಸ್ಮಾರಕಗಳ ಸೇವಾಕಾರ್ಯ ಕೊಡುಗೆಯನ್ನು ಕುರಿತು ವಿವರಿಸಲಾಗಿದೆ.

## ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನದ ಶೀರ್ಷಿಕೆಯು "ಬೆಳಗಾವಿ ನಗರದ ಮುಸ್ಲಿಂ ಸ್ಮಾರಕಗಳು" ಎಂದಾಗಿದ್ದು ಚರಿತ್ರೆಯ ಚಾರಿತ್ರಿಕ ಚೌಕಟ್ಟಿನಲ್ಲಿ ನಡೆಯುವ ಅಧ್ಯಯನವಾಗಿದೆ. ಮುಸ್ಲಿಂ ಸ್ಮಾರಕಗಳ ರಚನೆ, ಶೈಲಿ, ಪಂಥ ಹಾಗೂ ಅವುಗಳ ಇತಿಹಾಸ ಕುರಿತು ಈ ಅಧ್ಯಯನದ ಮೂಲಕ ಸಂಬಂಧಿಸಿದ ವಿವರಗಳನ್ನು ಬೆಳಕಿಗೆ ತರುವ ಮುಖ್ಯ ಉದ್ದೇಶಹೊಂದಿದಾಗಿದೆ. ಆಧುನಿಕ ಯುಗ ಪ್ರಾರಂಭವಾಗುವ ಪೂರ್ವದಲ್ಲಿ ಸುಮಾರು ಐದು ಶತಮಾನಗಳ ಕಾಲ ಮುಸ್ಲಿಂ ಆಡಳಿತಗಾರರು ಈ ನೆಲೆಯಲ್ಲಿ ತಮ್ಮ ಆಡಳಿತಾತ್ಮಕ ಅನುಕೂಲಕ್ಕಾಗಿ ಹಾಗೂ

ಅವಶ್ಯಕತೆಯ ದೃಷ್ಟಿಯಿಂದ ಹಲವಾರು ಕಟ್ಟಡಗಳನ್ನು ನಿರ್ಮಿಸಿದ್ದಾರೆ. ಈ ಸ್ಮಾರಕಗಳ ಕುರಿತು ಹಲವು ಬಿಡಿ ಲೇಖನಗಳು ಪ್ರಕಟಗೊಂಡಿವೆ. ಆದರೆ ಅವುಗಳಿಗೆ ಸಂಬಂಧಿಸಿದಂತೆ ಸಮಗ್ರ ಮಾಹಿತಿಯನ್ನು ಒದಗಿಸುವ ಯಾವುದೇ ಪೂರ್ಣ ಪ್ರಮಾಣದ ಗ್ರಂಥಗಳು ಹೊರಬಂದಿಲ್ಲ ಹಾಗಾಗಿ ಪ್ರಸ್ತುತ ಈ ಸಂಪ್ರಬಂಧದಲ್ಲಿ ಅಂತಹ ಕೊರತೆಗಳನ್ನು ತಕ್ಕ ಮಟ್ಟಿಗೆ ತುಂಬುವ ಪ್ರಯತ್ನಮಾಡಲಾಗಿದೆ.

ಬೆಳಗಾವಿ ನಗರದ ಮುಸ್ಲಿಂ ಸ್ಮಾರಕಗಳು ಎಂಬ ವಿಷಯದಡಿಯಲ್ಲಿ ಪ್ರಾಚೀನ ಕಾಲದಿಂದ ಮಧ್ಯಕಾಲೀನ ವರೆಗಿನ ಭೌಗೋಳಿಕ ಮತ್ತು ರಾಜಕೀಯ ಇತಿಹಾಸ. ಮತ್ತು ಮಧ್ಯಕಾಲೀನ ಅವಧಿಯಲ್ಲಿ ರಚನೆಯಾದ ಧಾರ್ಮಿಕ ಸ್ಮಾರಕಗಳಾದ ಮಸೀದಿ, ದರ್ಗಾ, ಈದ್ಗಾ, ಆಶ್ರುಖಾನಗಳು. ಧಾರ್ಮಿಕೇತರ ಕಟ್ಟಡಗಳಾದ ಕೋಟೆ, ಅರಮನೆ, ಕಛೇರಿ, ಮಹಲ್, ಮನೆಗಳ ಇತ್ಯಾದಿ ಸ್ಥಿತಿಗತಿ, ಅವುಗಳ ಮಹತ್ವ ಹಾಗೂ ಆಚರಣೆ ಉತ್ಸವಗಳ ಕುರಿತು ಚರ್ಚಿಸಲಾಗಿದೆ. ಹಲವು ಅಂಶಗಳನ್ನು ತಿಳಿಸುವುದರೊಂದಿಗೆ ಸ್ಥಳೀಯ ಸಂಸ್ಕೃತಿಯೊಂದಿಗೆ ಮುಸ್ಲಿಂ ಧರ್ಮದ ಸಾಮರಸ್ಯ ಕುರಿತು ಪ್ರಸ್ತುತ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ಕ್ಷೇತ್ರಕಾರ್ಯದ ಮೂಲಕ ಮಾಹಿತಿಯನ್ನು ಸಂಗ್ರಹಿಸಿ ದಾಖಲಿಸಿ ಅವುಗಳನ್ನು ಪುನರ್ ಪರಿಶೀಲಿಸಿ ಜೊತೆಗೆ ಹೊಸ ಮಾಹಿತಿಗಳನ್ನು ಕ್ರೂಢಿಕರಿಸಲಾಗಿದೆ. ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಗೆ ಬೆಳಗಾವಿ ನಗರದ ಮುಸ್ಲಿಂ ಸ್ಮಾರಕಗಳು ನೀಡಿದ ಕೊಡುಗೆಯನ್ನು ಕುರಿತು ವಿವರಿಸುವ ಪ್ರಮುಖ ಉದ್ದೇಶ ಹೊಂದಲಾಗಿದೆ.

## ಅಧ್ಯಯನದ ವ್ಯಾಪ್ತಿ

ಯಾವುದೇ ಒಂದು ಸಂಶೋಧನೆಗೆ ಅಧ್ಯಯನದ ವ್ಯಾಪ್ತಿ ಪ್ರಮುಖ ಪಾತ್ರವಹಿಸುತ್ತದೆ. ಒಂದು ನಿರ್ದಿಷ್ಟ ಉದ್ದೇಶ ಕುರಿತು ಸಂಶೋಧನೆಯು ಯಶಸ್ವಿಯಾಗಲು ಹಾಗೂ ಅಧ್ಯಯನದ ಗುಣಮಟ್ಟ ಹೆಚ್ಚಿಸಲು ವ್ಯಾಪ್ತಿಯ ಖಚಿತಗೊಳಿಸುವಿಕೆಯು ಸಹಕಾರಿಯಾಗಿದೆ. ಹೀಗಾಗಿ ಪ್ರಸ್ತುತ ಸಂಶೋಧನಾ ವಿಷಯದ ವ್ಯಾಪ್ತಿಯು ಮುಸ್ಲಿಂ ಆಡಳಿತಗಾರರು ಆಗಮಿಸಿದ ಕಾಲಾವಧಿಯಿಂದ ಬ್ರಿಟಿಷ ಆಳ್ವಿಕೆಯ ಪ್ರಾರಂಭದವರೆಗೆ ಬೆಳಗಾವಿ ನಗರದಲ್ಲಿ ನಿರ್ಮಾಣವಾದ ಮುಸ್ಲಿಂ ಸ್ಮಾರಕಗಳನ್ನು ಮಾತ್ರ ಅಧ್ಯಯನ ವ್ಯಾಪ್ತಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ವಿಷಯಕ್ಕೆ ಪೂರಕವಾದ ಮಾಹಿತಿಗಳು ಅವಶ್ಯಕತೆ ಎಂದು ಕಂಡು ಬಂದಲ್ಲಿ ಇತರೆ ವಿವರಗಳನ್ನು ಸಹ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

## ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡಿರುವ ಬೆಳಗಾವಿ ನಗರದ ಮುಸ್ಲಿಂ ಸ್ಮಾರಕಗಳಿಗೆ ಸಂಬಂಧಿಸಿದಂತೆ ಪುರಾತತ್ವ, ಇತಿಹಾಸ, ದೇವಾಲಯ, ವಾಸ್ತುಶಿಲ್ಪ, ಸ್ಮಾರಕ ಹಾಗೂ

ಶಾಸನಗಳ ಕುರಿತು ಕಿರುಪರಿಚಯುವನ್ನು ಮಾಡಿ ಕೊಡುವ ಬಿಡಿ ಲೇಖನಗಳು ಪ್ರಕಟಗೊಂಡಿರುವುದನ್ನು ಗಮನಿಸಬಹುದು. ಕ್ಯಾಂಪ್‌ಬೆಲ್ ಎಂಬ ಅಧಿಕಾರಿಯು ೧೮೮೪ ರಲ್ಲಿ ಬೆಳಗಾವಿ ಜಿಲ್ಲೆಗೆ ಸಂಬಂಧಿಸಿದ ಗ್ಯಾಸೆಟಿಯರ್ ರಚಿಸಿದ್ದಾನೆ. ಆ ನಂತರ ಸೂರ್ಯನಾಥ ಕಾಮತ್‌ರವರು ರಚಿಸಿದ ಬೆಳಗಾವಿ ಜಿಲ್ಲೆಯ ಗ್ಯಾಸೆಟಿಯರ್ ೧೯೮೭ ರಲ್ಲಿ ಪ್ರಕಟವಾಯಿತು. ಇವುಗಳು ಬೆಳಗಾವಿ ನಗರಕ್ಕೆ ಸಂಬಂಧಿಸಿದ ಪ್ರಾಥಮಿಕ ಮಾಹಿತಿಗಳನ್ನು ಒದಗಿಸುತ್ತವೆ. ಮಾಲಗತ್ತಿ ವ್ಹಿ. ಸಿ. ಅವರ ಸಂಪಾದನೆಯಲ್ಲಿ ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ ಎಂಬ ಸಂಪುಟವು ಬೆಳಗಾವಿ ನಗರದ ಇತಿಹಾಸ ಕುರಿತು ವಿವರಿಸಿತ್ತದೆ. ಎಂ. ಬಿ. ನೇಗಿನಹಾಳ ಅವರ ನೇಗಿನಹಾಳ ಪ್ರಬಂಧಗಳು ಎಂಬ ಗ್ರಂಥದಲ್ಲಿ ನಗರದ ಇತಿಹಾಸ, ಭಾಷೆ, ಧರ್ಮಗಳ ಕುರಿತು ವಿವರಿಸುವ ಮಾಹಿತಿವುಳ್ಳ ಲೇಖನಗಳನ್ನು ಪ್ರಕಟಿಸಲಾಗಿದೆ. ಬೆಳಗಾವಿ ಸಾಂಸ್ಕೃತಿಕ ಅಧ್ಯಯನ ಕುರಿತು ರವೀಂದ್ರ ಚಿಕ್ಕಮಠವರು ಪಿ.ಎಚ್‌ಡಿ ಪ್ರಬಂಧವನ್ನು ೨೦೧೨ ರಲ್ಲಿ ಹಂಪಿ ಕ ವಿ ವಿದ್ಯಾಲಯಕ್ಕೆ ಮಂಡಿಸಿರುತ್ತಾರೆ. ಸರಜೂ ಕಾಟ್ಕರವರ ಸಂಪಾದಕತ್ವದಲ್ಲಿ 'ಬೆಳಗಾವಿ ಸಂಸ್ಕೃತಿಯ' ಕುರಿತು ಹಲವು ಲೇಖನಗಳುಳ್ಳ ಸಂಪುಟವನ್ನು ಪ್ರಕಟಿಸಿದ್ದಾರೆ. ಗೋಪಾಲ ಆರ್. ಅವರ ಸಂಪಾದನೆಯಲ್ಲಿ ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಕುರಿತು ೨೦೧೨ ರಲ್ಲಿ ಮೈಸೂರು ವಸ್ತು ಸಂಗ್ರಹಾಲಯದ ವತಿಯಿಂದ ಸಂಬಂಧಿಸುವ ಸಂಪುಟವನ್ನು ಪ್ರಕಟಿಸಲಾಗಿದೆ. ಸ್ಮಿತಾ ಸುರೇಬಾನಕರವರು 'ಬೆಳಗಾವಿ ವಾಸ್ತುಶಿಲ್ಪ ನಿಧಿ' ಎಂಬ ಕೃತಿಯಲ್ಲಿ ಬೆಳಗಾವಿ ಜಿಲ್ಲೆಯ ಸ್ಮಾರಕಗಳ ಕುರಿತು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಆದರೆ ಬೆಳಗಾವಿ ನಗರದ ಮುಸ್ಲಿಂ ಸ್ಮಾರಕಗಳನ್ನು ಕೇಂದ್ರವಾಗಿಟ್ಟುಕೊಂಡು ಯಾವುದೇ ಅಧ್ಯಯನಗಳು ಈ ವರೆಗೂ ರೂಪುಗೊಂಡಿರುವುದು ಕಾಣುವುದಿಲ್ಲ. ಆದ್ದರಿಂದ ಪ್ರಸ್ತುತ ಅಧ್ಯಯನವನ್ನು ಬೆಳಗಾವಿ ನಗರದಲ್ಲಿ ನಿರ್ಮಾಣವಾದಂಥ ಮುಸ್ಲಿಂ ಸ್ಮಾರಕಗಳ ಚರಿತ್ರೆಯನ್ನು ಕಟ್ಟಿಕೊಡುವದು ಹಾಗೂ ವಿಶ್ಲೇಷಿಸುವುದು ಈ ಅಧ್ಯಯನದ ಬಹುಮುಖ್ಯ ಉದ್ದೇಶವಾಗಿದೆ.

## ಅಧ್ಯಯನದ ವಿಧಾನ

ಇದುವರೆಗೂ ನಡೆದಿರುವ ಅಧ್ಯಯನಗಳನ್ನು ಗಮನದಲ್ಲಿಟ್ಟುಕೊಂಡು "ಬೆಳಗಾವಿ ನಗರದ ಮುಸ್ಲಿಂ ಸ್ಮಾರಕಗಳು" ಎಂಬ ಪ್ರಸ್ತುತ ಅಧ್ಯಯನಕ್ಕೆ ಬೇಕಾಗಿರುವ ಮಾಹಿತಿಯನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿ, ಕ್ರೂಢಿಕರಿಸುವ ಆಕರಗಳ ದಾಖಲೀಕರಣ ಹಾಗೂ ಛಾಯಾಚಿತ್ರ ಮಾಡಿಕೊಳ್ಳಲಾಗಿದೆ. ಅದರೊಂದಿಗೆ ಮೌಖಿಕ ಪರಂಪರೆ, ಸ್ಥಳೀಯ ಚರಿತ್ರೆ, ಐತಿಹ್ಯಗಳನ್ನು ಸಂಪನ್ಮೂಲ ವ್ಯಕ್ತಿಗಳೊಂದಿಗೆ ಚರ್ಚಿಸಿ ವಿಷಯಗಳನ್ನು ಸಂಗ್ರಹಿಸಲಾಗಿದೆ. ಈ ವಿಷಯಕ್ಕೆ ಸಂಬಂಧಿಸಿದ ಪೂರಕವಾದ ಪ್ರಾಥಮಿಕ ಮತ್ತು ಅನುಷಂಗಿಕ ಆಕರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಸಂಗ್ರಹಿಸಿದ ಮಾಹಿತಿಗಳ ಆಕರಗಳನ್ನು ಬಳಸಿಕೊಂಡು

ವಿಷಯಾನುಸಾರ ವಿಶ್ಲೇಷಿಸಿ, ಸಂಯೋಜಿಸಿ, ಅಂತರಶಿಸ್ತೀಯ ಅಧ್ಯಯನಗಳ ಮೂಲಕ ಪೂರ್ಣ ಪ್ರಮಾಣದ ಚರಿತ್ರೆಯನ್ನು ನಿರೂಪಿಸುವ ಪ್ರಯತ್ನ ಮಾಡಲಾಗಿದೆ. ವೈಜ್ಞಾನಿಕವಾಗಿ ಮತ್ತು ವಸ್ತುನಿಷ್ಠವಾದ ವಿಷಯಗಳನ್ನು ಈ ಸಂಪ್ರಬಂಧದ ರಚನೆಯಲ್ಲಿ ಪ್ರಾಮಾಣಿಕವಾಗಿ ಬಳಿಸಿಕೊಳ್ಳಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಗ್ರಂಥಋಣ, ನಕ್ಷೆಗಳು ಹಾಗೂ ಛಾಯಾಚಿತ್ರಗಳ ವಿವರಗಳನ್ನು ನೀಡಲಾಗಿದೆ.

## ಅಧ್ಯಯನದ ಸ್ವರೂಪ

ಬೆಳಗಾವಿ ನಗರದ ಮುಸ್ಲಿಂ ಸ್ಮಾರಕಗಳ ಕುರಿತಿರುವ ಅಧ್ಯಯನದ ಅನುಕೂಲಕ್ಕಾಗಿ ಐದು ಅಧ್ಯಾಯಗಳಲ್ಲಿ ವಿಷಯವನ್ನು ರೂಪಿಸಿಕೊಳ್ಳಲಾಗಿದೆ. ಈ ಐದು ಅಧ್ಯಾಯಗಳನ್ನು ಒಳಗೊಂಡ ವಿಷಯ ಮತ್ತು ತಾತ್ವಿಕ ಸ್ವರೂಪ ಹೀಗಿದೆ.

ಮೊದಲನೆಯ ಅಧ್ಯಾಯದಲ್ಲಿ ಶೀರ್ಷಿಕೆಗೆ ಸಂಬಂಧಿಸಿದಂತೆ ಪ್ರಸ್ತಾವನೆ ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ವಿಧಾನದ ಕುರಿತು ಸ್ಪಷ್ಟಪಡಿಸಲಾಗಿದೆ. ವಿಷಯಕ್ಕೆ ಪೂರಕವಾಗಿ ನಡೆದಿರುವಂತಹ ಸಮೀಕ್ಷೆಯನ್ನು ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಬೆಳಗಾವಿ ನಗರದ ಭೌಗೋಳಿಕ ಮತ್ತು ಐತಿಹಾಸಿಕ ಹಿನ್ನೆಲೆಯೊಂದಿಗೆ ಮಧ್ಯಕಾಲೀನ ನಗರದ ವ್ಯಾಪ್ತಿ, ಪ್ರದೇಶ, ಹಾಗೂ ಪೂರ್ವ ಇತಿಹಾಸದಿಂದ ಮಧ್ಯಕಾಲಿನ ಅಂತ್ಯದವರೆಗಿನ ಇತಿಹಾಸವನ್ನು ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಬೆಳಗಾವಿ ನಗರದ ಮುಸ್ಲಿಂ ಸ್ಮಾರಕಗಳ ಕುರಿತು ಇತಿಹಾಸ ಮತ್ತು ವಸ್ತುಸ್ಥಿತಿ ಕುರಿತು ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಬೆಳಗಾವಿ ನಗರದ ಮುಸ್ಲಿಂ ಸ್ಮಾರಕಗಳಿಗೆ ಸಂಬಂಧಿಸಿದ ಆಚರಣೆ, ಉತ್ಸವ ಕುರಿತು ವಿವರಿಸಲಾಗಿದೆ.

ಐದನೆಯ ಅಧ್ಯಾಯವು ಸಮಾರೋಪವಾಗಿದ್ದು, ಪ್ರಸ್ತುತ ಈ ಅಧ್ಯಯನದಿಂದ ಕಂಡುಕೊಂಡ ಪ್ರಮುಖ ಸಂಗತಿಗಳ ಸಮೀಕ್ಷೆಯ ಫಲಿತಾಂಶಗಳು ಹಾಗೂ ಕೆಲವು ನಿರ್ಧಾರಗಳನ್ನು ಪ್ರಕಟಿಸುವ ಪ್ರಯತ್ನ ಮಾಡಲಾಗಿದೆ.

## ಅಧ್ಯಾಯ ಎರಡು

# ಭೌಗೋಳಿಕ ಮತ್ತು ಐತಿಹಾಸಿಕ ಹಿನ್ನೆಲೆ

ಪ್ರತಿಯೊಂದು ಪ್ರದೇಶವು ತನ್ನದೆ ಆದ ಭೌಗೋಳಿಕ ವೈಶಿಷ್ಟಗಳಿಂದ ಕೂಡಿರುತ್ತದೆ. ಈ ಹಿನ್ನೆಲೆಯಲ್ಲಿ ಬೆಳಗಾವಿಯು ಕೂಡಾ ಇದರಿಂದ ಹೊರತಾಗಿಲ್ಲ. ಪಶ್ಚಿಮಕ್ಕೆ ಕರಾವಳಿ ಮತ್ತು ಸಹ್ಯಾದ್ರಿ ಬೆಟ್ಟಗಳ ಸಾಲುಗಳಲ್ಲಿ ಮಲೆನಾಡು ಹಾಗೂ ಪೂರ್ವದಲ್ಲಿ ಸಮೃದ್ಧ ಬೆಳವಲ ನಾಡುಗಳಿಂದ ಕೂಡಿದ ಪ್ರದೇಶವಾಗಿದೆ. ಇಲ್ಲಿಯ ಸುಂದರವಾದ ನದಿಕಣಿವೆಗಳೂ ಅದ್ಭುತವಾದ ಗುಡ್ಡಗಾಡುಗಳು ರಮ್ಯವಾದ ಅರಣ್ಯ ಪ್ರದೇಶಗಳಿಂದ ನೋಡುಗರ ಹೃದಯವನ್ನು ಸೆಳೆಯುತ್ತದೆ. ಈ ಸಮೃದ್ಧವಾದ ಭೌಗೋಳಿಕ ರಚನೆಯು ಜನಜೀವನದ ಮೇಲೆ ರಾಜಕೀಯವಾಗಿ ಹಾಗೂ ಸಾಂಸ್ಕೃತಿಕವಾಗಿ ಪ್ರಭಾವ ಬೀರಿದೆ.

ಬೆಳಗಾವಿಯು ರಾಜ್ಯದ ವಾಯುವ್ಯ ಭಾಗದಲ್ಲಿದೆ. ೧೫'೨೩ ರಿಂದ ೧೬'೫೮ ಉತ್ತರ ಅಕ್ಷಾಂಶವರಗೆ ೭೪'೫ ರಿಂದ ೭೫'೨೮ ಪೂರ್ವ ರೇಖಾಂಶದವರಗೆ ಹಬ್ಬಿದೆ. ಸಮುದ್ರ ಮಟ್ಟದಿಂದ ೨೨೦೦ ಅಡಿ ಎತ್ತರದಲ್ಲಿದ್ದು, ಸಮುದ್ರ ತೀರದಿಂದ ಸು ೫೦ ಮೈಲಿ ದೂರದಲ್ಲಿದೆ. ಬೆಳಗಾವಿಯು ಸಮಶೀತೋಷ್ಣ ಹವಾಗುಣವನ್ನು ಹೊಂದಿದೆ.[೧]

ನಗರದ ಸುತ್ತಮುತ್ತ ಒಂದರಿಂದ ಹತ್ತು ಮೀ ದಪ್ಪವಾದ ಕಂದು ಬಣ್ಣದ ಅಗ್ನಿಜನ್ಯ ಲಾವಾ(ಬಸಾಲ್ಟ್) ಶಿಲೆಗಳೂ ಹೆಚ್ಚಾಗಿ ಕಂಡುಬರುತ್ತವೆ. ಇವು ೬ ಕೋಟಿ ವರ್ಷಗಳ ಪೂರ್ವದ ದಖ್ಖನ್ ಟ್ರಾಪ್ ಶಿಲಾ ಸಮುದಾಯಕ್ಕೆ ಸೇರಿದವುಗಳಾಗಿವೆ ಎಂದು ಭೂಗೋಳಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ. ಅಗ್ನಿಜನ್ಯ ಮೂಲದ ರೂಪಾಂತರ ಶಿಲೆಗಳಾದ ಗ್ರಾನೈಟ್, ನೈಸ್, ಮರಳುಶಿಲೆ, ಸುಣ್ಣದಶಿಲೆಗಳ ನಿಕ್ಷೇಪಗಳನ್ನು ಬೆಳಗಾವಿ ಸುತ್ತಮುತ್ತಲಿನ ಪ್ರದೇಶವು ಹೊಂದಿದೆ. ಬೆಳಗಾವಿಯ ಸುತ್ತಮುತ್ತಲಿನ ಭಾಗವು ಹೆಚ್ಚಾಗಿ ಕಪ್ಪುಮಣ್ಣಿನಿಂದ

ಕೂಡಿದ್ದು ಕೆಲವು ಕಡೆ ಕೆಂಪು ಮಣ್ಣು ಹರಡಿಕೊಂಡು ಅತ್ಯಂತ ಫಲವತ್ತಾದ ಮಣ್ಣಿನ ಹಂಚಿಕೆಯಿಂದ ಕೂಡಿದೆ. ಹೀಗಾಗಿ ಈ ಪ್ರದೇಶದ ಕೃಷಿ ಭೂಮಿಯು ಶೇ ೭೦% ರಷ್ಟು ಕಪ್ಪು ಮಣ್ಣಿನಿಂದಲೇ ಆವೃತವಾಗಿದೆ.[೨]

ಬೆಳಗಾವಿ ಪ್ರದೇಶವು ಪಶ್ಚಿಮದ ಸಹ್ಯಾದ್ರಿ ಬೆಟ್ಟಗಳ ಮಲೆನಾಡು ಸೆರಗನ್ನು ಹೊಂದಿದ ಕಾರಣ ಮಳೆ ಪ್ರಮಾಣ ಸು. ಶೇ ೮೦ ರಷ್ಟು ಗರಿಷ್ಠ ಪ್ರಮಾಣದಲ್ಲಿ ಕಂಡುಬರುತ್ತದೆ. ಏಪ್ರಿಲ್ ಮೇ ತಿಂಗಳಲ್ಲಿ ಸಾಧಾರಣವಾಗಿ ಪ್ರಾರಂಭವಾಗುವ ಮಳೆಯು ಜೂನ್‌ನಿಂದ ಅಕ್ಟೋಬರ್‌ವರೆಗೂ ಹೆಚ್ಚಿನ ಪ್ರಮಾಣದಲ್ಲಿ ಸುರಿಯುತ್ತದೆ. ಈ ಮಳೆಯ ಪ್ರಭಾವದಿಂದ ಸಹಜವಾಗಿ ಈ ಪ್ರದೇಶದಲ್ಲಿ ತಂಪಾದ ವಾತವರಣ ಇರುತ್ತದೆ. ಆದರೂ ಕೆಲವೊಮ್ಮೆ ಬೇಸಿಗೆ ಕಾಲದಲ್ಲಿ ಸು ೪೦ ರಿಂದ ೪೨ % ಡಿಗ್ರಿ ಸೆ. ಬಿಸಿಲಿನ ತಾಪಮಾನ ದಾಖಲಾಗಿದ್ದನ್ನು ಕಾಣಬಹುದು.

ಬೆಳಗಾವಿ ಪ್ರದೇಶದಲ್ಲಿ ಸ್ವಾಭಾವಿಕ ಸಸ್ಯವರ್ಗ ಹಂಚಿಕೆಯಾದ್ದರಿಂದ ವಿವಿಧ ಜಾತಿಯ ಸಸ್ಯ ಸಂಕುಲವನ್ನು ಹೊಂದಿದೆ. ಬಿದಿರು, ಮತ್ತಿ, ನಂದಿ, ಹೊನ್ನ, ತೇಗು(ಸಾಗವಾನಿ), ತೆಂಗು, ಬೀಟೆ, ಕರಿಮರ ಜಾಲಿ, ಹುಣಸೆ, ಶ್ರೀಗಂಧ ಹಾಗೂ ಮಾವು ಇನ್ನೂ ಮುಂತಾದ ಸಸ್ಯವರ್ಗವನ್ನು ಈ ಭಾಗದಲ್ಲಿ ಕಾಣಬಹುದಾಗಿದೆ.

**ಪ್ರಾದೇಶಿಕ ಹಿನ್ನೆಲೆ**

ಒಂದು ಜನವಸತಿ ಪ್ರದೇಶವು ಕ್ರಮೇಣವಾಗಿ ಗ್ರಾಮ, ಪಟ್ಟಣ ನಗರ ಪ್ರದೇಶವಾಗಿ ಪರಿವರ್ತನೆಗೊಳ್ಳುವ ಪ್ರಕ್ರಿಯೆ ಸಂಕೀರ್ಣವಾದುದಾಗಿದೆ. ಈ ಪ್ರಕ್ರಿಯೆಯನ್ನು ನಗರೀಕರಣ ಎಂದು ಕರೆಯಬಹುದು. ಬೆಳಗಾವಿಯು ಪೌರಾಣಿಕ ಮಹತ್ವ ಪಡೆದ ವೈವಿಧ್ಯಮಯ ಸಂಸ್ಕೃತಿಯ ಸೌರಭ ಸೂಸುವ ವಿವಿಧ ರಾಜಮನೆತನಗಳಾದ ಶಾತವಾಹನರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಳುಕ್ಯರು, ಕಲಚೂರಿ, ಸೇವುಣ, ಹೊಯ್ಸಳ, ವಿಜಯನಗರ, ಬಹುಮನಿ, ಆದಿಲ್‌ಶಾಹಿ ಮತ್ತು ಮೊಘಲ ಆಳ್ವಿಕೆಗೆ ಒಳಪಟ್ಟಿತ್ತು. ಅಲ್ಲದೆ ಸಾಮಂತರಸರಾದ ರಟ್ಟರು, ಗೋವೆಯ ಕದಂಬರು, ಕೊಂಕಣದ ಶಿಲಾಹಾರರ ಮನೆತನಗಳ ಆಡಳಿತಕ್ಕೊಳಪಟ್ಟಿರುವುದು ಇವರೆಲ್ಲರ ರಾಜಕೀಯ ಪೋಷಣೆಯ ತೊಟ್ಟಿಲಲ್ಲಿ ಬೆಳಗಾವಿ ಸಮೃದ್ಧ ನಾಡಾಗಿ ಬೆಳೆಯಿತು. ಸಾಂಸ್ಕೃತಿಕ ಮತ್ತು ಐತಿಹಾಸಿಕ ಮಹತ್ವವುಳ್ಳ ಕರ್ನಾಟಕದ ಕೆಲವು ಪ್ರಮುಖ ನಗರಗಳಲ್ಲಿ ಒಂದಾಗಿದೆ. ರಾಜ್ಯದ ಐದನೆಯ ದೊಡ್ಡ ನಗರವಾಗಿ ರೂಪಗೊಂಡಿರುವ ಬೆಳಗಾವಿಯು ಹಂತ ಹಂತವಾಗಿ ಬೆಳವಣಿಗೆ ಹೊಂದಿ ಇಂದು ಮಹಾನಗರ ವ್ಯಾಪ್ತಿಯಲ್ಲಿ ಬರುವ ಬೆಳಗಾವಿಯ ಮೂರು ಪಟ್ಟಣಗಳು ಹಾಗೂ ಎಂಟು ಹಳ್ಳಿಗಳೂ ಕೂಡಿಕೊಂಡಿವೆ.

ಶಿಲಾಯುಗ ಕಾಲದಿಂದಲೂ ಮಾನವ ನೆಲಸಿದ ಎನ್ನಲಾದ ಬೆಳಗಾವಿಯು ಕಾಲಂತರದಲ್ಲಿ ಹಂತ ಹಂತವಾಗಿ ಬೆಳವಣಿಗೆ ಹೊಂದಿರಬಹುದಾದ ಕುರುಹುಗಳು ಇಲ್ಲಿ ದೊರೆಯುತ್ತವೆ. ಪ್ರಾಚೀನ ಬೆಳಗಾವಿ ಈಗೀನ ರೇಲ್ವೆ ನಿಲ್ದಾಣದ ಉತ್ತರ ಬದಿಯಲ್ಲಿ ದಂಡಿನ ಶಿಬಿರದ ಪೂರ್ವಕ್ಕೆ ನೆಲಸಿತ್ತು. ಈಗಲೂ ಅಲ್ಲಿ ಪುರಾತನ ಬಾವಿಯ ಅವಶೇಷಗಳಿವೆ. ಅಲ್ಲದೆ 'ನಾಗರಕೆರೆ ' ಎಂಬ ಹೆಸರಿನ ಬಾರಿ ಗಾತ್ರದ ಕೆರೆಯೊಂದು ಈ ಪ್ರದೇಶದ ಮೇಲ್ಭಾಗದಲ್ಲಿ ಅಸ್ತಿತ್ವದಲ್ಲಿತ್ತು. ಈಗಿರುವ ರೇಲ್ವೆ ಸೇತುವೆಯು ಪ್ರಸ್ತುತ ಕೆರೆಯ ಪೂರ್ವ ಏರಿಯ ಮೇಲೆ ಕಟ್ಟಲಾಗಿದೆ. ಗೋವೆ ಅಗಸಿಯ ಬಸ್ ನಿಲ್ದಾಣದ ಕೆಳಗಡೆಯಿಂದ ಈ ಕೆರೆಯ ಒಂದು ಕೋಡಿ ಈಗಲೂ ಹರಿಯುತ್ತಿರುವುದನ್ನು ನೋಡಬಹುದು. ಈ ಕೆರೆ ಪಶ್ಚಿಮದಲ್ಲಿ ಒಂದು ಕಿಲೋ ಮೀಟರ ಪಸರಿಸಿತ್ತು. ಪಶ್ಚಿಮದಲ್ಲಿ ಈಗಿರುವ ಕನ್ನಡ ಶಾಲೆಗೆ ಈಗಲೂ 'ನಾಗಝರಿ ಶಾಲೆ' ಎಂದೇ ಜನ ಕರೆಯುತ್ತಾರೆ. ಹೀಗೆ ಸುಮಾರು ಒಂದು ನೂರು ವರ್ಷಗಳ ಹಿಂದೆ ಹನ್ನೆರಡೂ ತಿಂಗಳು ನೀರು ಚಿಮ್ಮುವ ಝರಿವೊಂದು ಅಲ್ಲಿ ಇದ್ದುದೇ ಹೀಗೆ ಹೆಸರಾಗಲು ಕಾರಣ. ಇಷ್ಟು ದೊಡ್ಡದಾದ ಕೆರೆ ಮತ್ತು ಅದಕ್ಕೆ ತಾಗಿದ ಪೂರ್ವಕ್ಕಿರುವ ಪ್ರಾಚೀನ ವಸತಿ ಸ್ಥಾನ. ಇವು ಶಾತವಾಹನರ ಕಾಲಕ್ಕಿಂತ ಪೂರ್ವದವು ಬಹುಶಃ ನಾಗರ ಸಂಸ್ಕೃತಿಗೆ ಸಂಬಂಧ ಪಟ್ಟವೆ ಎಂದು ಎಂ.ಬಿ. ನೇಗಿನಹಾಳರವರು ವಿಶ್ಲೇಷಿಸಿದ್ದಾರೆ.[೩]

ತರುವಾಯ ಶಾತವಾಹನರ ಕಾಲದ ಬೆಳಗಾವಿ ಇದು ಈಗಿನ ಹಳೆ ಬೆಳಗಾವಿ, ವಡಗಾಂವಿಯ ಪೂರ್ವಭಾಗ ಮತ್ತು ಮಾಧವಪುರಗಳ ಪ್ರದೇಶಗಳನ್ನು ಒಳಗೊಂಡಿತ್ತು. ಇಲ್ಲಿ ಶಾತವಾಹನರ ಕಾಲದ ನಗರಾವಶೇಷಗಳು ಪತ್ತೆಯಾಗಿರುವುದು. ಕ್ರಿಸ್ತ ಪೂರ್ವ ಒಂದನೇ ಶತಮಾನದ ಬ್ರಾಹ್ಮಿಲಿಪಿ ಶಾಸನ ಸಿಕ್ಕಿರುವುದು ಎಲ್ಲರಿಗೂ ತಿಳಿದಿದೆ. ಈ ಪ್ರದೇಶವನ್ನು ವಿದ್ವಾಂಸರು ಕಂದಾಯ ಇಲಾಖೆಯ ದಾಖಲೆಗಳನ್ನುನುಸರಿಸಿ ಮಾಧವಪುರ ವಡಗಾವಿ ಪ್ರದೇಶವೆಂದು ಕರೆದಿದ್ದಾರೆ. ಹೊರತು ವಾಸ್ತವವಾಗಿ ಈ ಪ್ರದೇಶ ಈಗಲೂ ಹಳೇ ಬೆಳಗಾವಿಯೆಂದು ಕರೆಯಲಾಗುವ ಊರಿನ ಒಂದು ಭಾಗ. ಈ ಪುರಾತನ ನಗರಕ್ಕೆ ಒಂದು ರಕ್ಷಣಾ ಗೋಡೆ ಅಥವಾ ಕೋಟೆ ಕೂಡಾ ಇತ್ತು. ಇದರ ಅವಶೇಷ ರೂಪದ ಅಡಿಪಾಯವು ಉತ್ಖನನದಲ್ಲಿ ಗುರುತಿಸಲ್ಪಟ್ಟಿದೆ.[೪]

ಶಾತವಾಹನ ಕಾಲದ ಕ್ರಿಸ್ತ ಪೂರ್ವ ಒಂದನೆಯ ಶತಮಾನದ ನಗರವು ತುಂಬಾ ಸಂಪದ್ಭರಿತವಾಗಿತ್ತು. ವಾಣಿಜ್ಯ ವ್ಯಾಪರಗಳ ದೊಡ್ಡ ಕೆಂದ್ರವೆನಸಿತ್ತು. ಕರ್ನಾಟಕದಲ್ಲಿ ಈಗ ಪತ್ತೆಯಾಗಿರುವ ಸನ್ನತಿಯ ತರುವಾಯ ಇಂಥದೊಂದು ದೊಡ್ಡ ನಗರದ ಅವಶೇಷಗಳು ಇಲ್ಲಿ ಕಂಡು ಬಂದಿದ್ದನ್ನು ಸ್ಮರಿಸಬಹುದು. ಇಲ್ಲಿ ದೊರೆತ ಕ್ರಿ.ಪೂ ಒಂದನೇ ಶತಮಾನದ

ಬ್ರಾಹ್ಮಿ ಲಿಪಿ ಶಾಸನದಲ್ಲಿ ಈ ಪ್ರದೇಶಕ್ಕೆ 'ಯದುಗ್ರಾಮ'ವೆಂಬ ಸ್ಥಳ ವಾಚಕದ ಉಲ್ಲೇಖ ಇರುವುದರಿಂದ ಬೆಳಗಾವಿಗೆ ಎರಡು ಸಾವಿರ ವರ್ಷಗಳ ಹಿಂದೆ ಅದೇ ಹೆಸರು ಇರಬಹುದೆಂದು ವಿದ್ವಾಂಸರು ಊಹಿಸಿದ್ದಾರೆ.[೫] ಕರ್ನಾಟಕದಲ್ಲಿ ಮೌರ್ಯರ ಆಳ್ವಿಕೆಯ ತರುವಾಯ ಮತ್ತು ಕದಂಬ ಪೂರ್ವಕಾಲದ ಸುಮಾರು ೫೦೦ ವರ್ಷಗಳ ಅವಧಿಯ ಚರಿತ್ರೆ ಸಂಬಂಧ ಅವಶೇಷಗಳನ್ನು ಉಳಿಸಿಕೊಂಡು ಬಂದ ಶ್ರೇಯಸ್ಸು ಈ ಹಳೆಯ ಬೆಳಗಾವಿಯದು.

ನಂತರದ ಕಾಲದ ಅವಶೇಷಗಳನ್ನು ಸದ್ಯದ ಕೋಟೆ ಪ್ರದೇಶ ಅದರ ಸಮೀಪದ ಪಶ್ಚಿಮ ಮತ್ತು ಉತ್ತರ ಬದಿಗಳಲ್ಲಿ ಎಂದರೆ ಈಗಿನ ಖಡೇಬಜಾರ, ಮಾಳಿಗಲ್ಲಿ ಕಾಮತಗಲ್ಲಿ, ಹಳೆ ಧಾರವಾಡ ರಸ್ತೆಯ ಅಕ್ಕ ಪಕ್ಕಗಳಲ್ಲಿ ಗುರುತಿಸಬಹುದು. ಈಗಿರುವ ದೊಡ್ಡ ಕೋಟೆಯ ಮೇಲ್ಭಾಗ ಮುಸಲ್ಮಾನ ಆಡಳಿತಗಾರರಿಂದ ನಿರ್ಮಿಸಲ್ಪಟ್ಟಿದ್ದರೂ ಅದರ ಅತೀ ಕೆಳಗಿನ ಸ್ತರದಲ್ಲಿ ಬನವಾಸಿ ಕದಂಬರ ಕಾಲಾವಧಿಗೆ ಸೇರುವ ರಚನೆಯು ಅದರ ಮೇಲೆ ಚಾಲುಕ್ಯ, ರಾಷ್ಟ್ರಕೂಟರ ಕಾಲದ ರಚನೆಯೂ ಇದೆಯೆಂದು ಡಾ. ಎಸ್ ಕೆ. ಜೋಶಿಯವರು ತಿಳಿಸುತ್ತಾರೆ.[೬]

ಕೋಟೆಯ ಪ್ರದೇಶವಲ್ಲದೆ ಅದರ ಸಮೀಪದ ಖಡೇಬಜಾರಿನಲ್ಲಿ ಒಂದು ಚಿಕ್ಕ ದೇವಾಲಯ ನಿರ್ಮಾಣಗೊಂಡಿರುವುದನ್ನು ಮತ್ತು ದರಬಾರಗಲ್ಲಿ ಮತ್ತು ಖಂಜರಗಲ್ಲಿ ಪ್ರದೇಶಗಳಲ್ಲಿ ಕನಿಷ್ಠ ಮೂರು ಬಸದಿ ಅಥವಾ ದೇವಾಲಯಗಳ ಅವಶೇಷಗಳಿವೆ. ಕಾಮತ ಓಣಿಯ ಪಶ್ಚಿಮದ ಮಾಳಿಗಲ್ಲಿವರೆಗಿನ ಪ್ರದೇಶ ಮತ್ತು ಕೋಟೆಯ ಉತ್ತರದಲ್ಲಿರುವ ಕೆರೆವರೆಗಿನ ವಿಸ್ತಾರವಾದ ಬಯಲು ಪ್ರದೇಶ ಪ್ರಾಚೀನ ಕಾಲದ ಬೆಳಗಾವಿಗೆ ಸೇರಿದ್ದೆಂದು ಹೇಳಬಹುದು. ನಂತರ ಹಂತದ ಬೆಳಗಾವಿಯು ಈಗಿನ ಮಠಗಲ್ಲಿ ಹಳೆ ರವಿವಾರ ಪೇಟೆಯ ದಕ್ಷಿಣ ಪಾರ್ಶ್ವದಿಂದ ಪಶ್ಚಿಮದ ಹನುಮಂತದೇವರ ಗುಡಿವರೆಗೆ ಪೂರ್ವ ಪಶ್ಚಿಮವಾಗಿ ಮತ್ತು ದೇಶಪಾಂಡೆ ಗಲ್ಲಿಯಿಂದ ಅಥವಾ ಗಣಪತಿದೇವಾಲಯದಿಂದ ಶನಿದೇವಾಲಯದವರೆಗೆ ದಕ್ಷಿಣೋತ್ತರವಾಗಿ ಹಬ್ಬಿತ್ತು. ಈ ಪ್ರದೇಶದಲ್ಲಿ ಕೂಡಾ ಹಲವಾರು ಪ್ರಾಚ್ಯವಶೇಷಗಳು ಉಪಲಬ್ದವಾಗಿವೆ. ಪ್ರಾಚೀನ ಕಾಲದಲ್ಲಿ ಜನರು ಗ್ರಾಮವನ್ನು ನಿರ್ಮಿಸುವಾಗ ಮೊದಲು ಗ್ರಾಮ ದೇವತೆ ಗುಡಿಯನ್ನು ಸಿದ್ಧಗೊಳಿಸಿ ನಂತರ ಗ್ರಾಮವನ್ನು ನಿರ್ಮಿಸುತ್ತಿದ್ದರು. ಎಂಬುದಕ್ಕೆ ಕುರುಹುವಾಗಿ ಅನಂತಶಯನ ದೇವಾಲಯದ ಪಕ್ಕದಲ್ಲಿ ದ್ಯಾಮವ್ವನ ಗುಡಿ ನಿರ್ಮಿಸಲಾಗಿದೆ. ಇದರೊಂದಿಗೆ ಈಗಿನ ಕಪಿಲೇಶ್ವರ ದೇವಾಲಯದ ಪ್ರದೇಶವನ್ನು ಇಲ್ಲಿ ಗಮನಿಸಬೇಕು. ಈ ಪ್ರದೇಶ ಮೂಲತಹ ಮೊದಲ ಬೆಳಗಾವಿ ಅಥವಾ ನಾಗರ ಬೆಳಗಾವಿಗೆ ಸೇರಿದ್ದೊ ಅಥವಾ ಕೊನವಾಳ ಬಾಂದೂರ ಎಂಬ ಪ್ರಾಚೀನ ಹಳ್ಳಿಗಳಿಗೆ ಸಂಬಂಧಿಸಿದ್ದೊ ಎಂದು ಹೇಳುವುದು ಕಷ್ಟ. ಮುಂದೆ ಇಲ್ಲಿ [illegible]

ತಿಂಗಳು ಹರಿಯುತ್ತಿದ್ದ ಹಳ್ಳ ಮತ್ತು ದೇವಾಲಯದ ದಕ್ಷಿಣ ಬದಿಯಲ್ಲಿದ್ದ ಸುಂದರವಾದ ಕೊಳಗಳು ಈಗ ವಿಕೃತಗೊಂಡಿವೆ. ಮೊದಲು ಈ ಭಾಗದಲ್ಲಿ ಒಂದು ರುದ್ರಭೂಮಿ ಇತ್ತು, ಈಗಲೂ ಇಲ್ಲಿ ಶ್ರದ್ಧಾ ಕರ್ಮಾದಿಗಳನ್ನು ಮಾಡುವ ಪರಂಪರೆ ನಡೆದುಕೊಂಡು ಬಂದಿದೆ.[೭]

ಈ ಅವಧಿಯಲ್ಲಿ ಬೆಳಗಾವಿಯ ಪ್ರದೇಶದಲ್ಲಿ ರಾಷ್ಟ್ರಕೂಟರ ಅಧೀನಕ್ಕೆ ಒಳಪಟ್ಟಿರಬಹುದಾದ ಕ್ರಿ.ಶ.೮೦೫ರ ನೇಸರಗಿ ಶಾಸನದಿಂದ ತಿಳಿದುಬರುತ್ತದೆ. ಈ ಶಾಸನದಲ್ಲಿ ಇಕ್ಷುಗ್ರಾಮದ ಉಲ್ಲೇಖ ಕಂಡುಬರುತ್ತದೆ.[೮] ತರುವಾಯ ಕಲ್ಯಾಣಚಾಲುಕ್ಯರು, ರಟ್ಟರು, ಗೋವೆಕದಂಬರು, ದೇವಗಿರಿಯಾದವರು ವಿಜಯನಗರದ ಅರಸರು ಬೆಳಗಾವಿಯನ್ನು ತಮ್ಮ ವಶಕ್ಕೆ ಪಡೆದುಕೊಂಡು ನಗರದ ಅಭಿವೃದ್ಧಿಗೆ ಕಾರಣರಾಗಿದ್ದಾರೆ. ಕಲ್ಯಾಣ ಚಾಲುಕ್ಯರ ಸಾಮಂತರಾದ ರಟ್ಟರು. ಬೆಳಗಾವಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಈಗಿನ ಮುಖ್ಯ ಕೋಟೆಯ ಭಾಗವನ್ನು ಅಭಿವೃದ್ಧಿಪಡಿಸಿದರು. ಕೋಟೆಯಲ್ಲಿ ನಗರದ ಬಸವನ ಬೀದಿಯಲ್ಲಿ ಮನೆ, ದೇವಾಲಯ, ಬಸದಿಗಳನ್ನು ನಿರ್ಮಿಸಿದ್ದನ್ನು ಕಾಣಬಹುದಾಗಿದೆ.

ಅವಶ್ಯಕತೆ ಅನೂಕೂಲತೆ ಮತ್ತು ಉಪಯೋಗವಾಗುವಂತಹ ನಗರಗಳನ್ನು ಯೋಜಿಸುತ್ತಿದ್ದರು. ಈ ಪರಿಸರದ ಪ್ರಮುಖ ಪ್ರದೇಶಗಳ ರಕ್ಷಣಾ ದೃಷ್ಟಿಯಿಂದ ಸುತ್ತುವರೆದ ಗೋಡೆಗಳಿದ್ದವು ಮತ್ತು ಸಮಾಜದ ವಿವಿಧ ವೃತ್ತಿಯಲ್ಲಿ ನಿರತರಾದವರಿಗೆ ಪ್ರತ್ಯೇಕವಾದ ಓಣಿಗಳಿದ್ದವು ಉದಾ: ಬ್ರಾಹ್ಮಣಗೇರಿ, ಬ್ರಹ್ಮಪುರಿ, ತೆಲ್ಲಿಗಗೇರಿ, ಚಂದಗೇರಿ, ಮೇದಾರ ಓಣಿ, ಮಡಿವಾಳರ ಓಣಿ, ಬೇಡರ ಓಣಿ, ಸೂಳೆಗೇರೆ, ಒಕ್ಕಲಗೇರೆ, ದಲಿತಗೇರಿ, ಮುಂತಾದವುಗಳು. ಮಾರುಕಟ್ಟೆ ನಗರದ ಕೆಂದ್ರ ಸ್ಥಾನದಲ್ಲಿದ್ದು ಆಯಾ ವ್ಯಾಪಾರಿಗಳು ಮಾರುತ್ತಿದ್ದ ಸರಕುಗಳ ಪ್ರಕಾರ ವಿಶಾಲವಾದ ಮಳಿಗೆಯನ್ನು ಹೊಂದಿದ್ದವು. ಸೌಂದರ್ಯ ಸಾಧನಗಳು, ಬಟ್ಟೆ ದವಸ ಧಾನ್ಯಗಳು, ಹೂ ಹಣ್ಣು ಮುಂತಾವುದವುಗಳಿಗೆಂದೆ ಮೀಸಲಾದ ಪ್ರತ್ಯೇಕ ಅಂಗಡಿಗಳಿದ್ದವು. ನಗರದಲ್ಲಿ ವಿವಿಧ ಪ್ರದೇಶಗಳಿಂದ ಬಂದ ವರ್ತಕರಿಗಾಗಿ ಪ್ರತ್ಯೇಕವಾದ ಬಡಾವಣೆಗಳಿದ್ದು ಲಾಟ, ಗುಜರಾತ ಮತ್ತು ಮಲಿಯಾಳ ದೇಶದ ವರ್ತಕರು ವಾಸವಾಗಿದ್ದರೆಂದು ಕ್ರಿ.ಶ. ೧೨೦೪ ರ ರಟ್ಟರ ಬೆಳಗಾವಿ ಶಾಸನ ತಿಳಿಸುತ್ತದೆ.[೯]

ಸೇವುಣರ ಆಳ್ವಿಕೆ ಕಾಲದಲ್ಲಿ ಇಕ್ಷು(ಬೆಳಗಾವಿ) ಗ್ರಾಮದ ಅಗ್ರಹಾರದ ಮಹಾಜನರಿಗೆ ದತ್ತಿ ನೀಡಿದ ಉಲ್ಲೇಖ ಕೋಟೆಯ ಸಫಾ ಮಸೀದಿಯ ಸ್ತಂಭದ ಶಾಸನದಿಂದ ತಿಳಿದುಬರುತ್ತದೆ.[೧೦]

ಕ್ರಿ.ಶ ೧೪೭೩ ರಲ್ಲಿ ಬೆಳಗಾವಿ ಕೋಟೆ ವಿಜಯನಗರದ ಕೈ ತಪ್ಪಿ ಬಹುಮನಿ ಮತ್ತು ವಿಜಾಪುರದ ಆದಿಲ್ ಶಾಹಿಗಳ ಕೈ ಸೇರಿತು. ಮಹ್ಮದ ಗವಾನ 'ಮುಸ್ತಾಪ್' ಎಂಬ ಅಧಿಕಾರಿಯನ್ನು ಬೆಳಗಾವಿ ನಗರದ ಉಸ್ತುವಾರಿಗೆ ನೇಮಿಸಿದನು. ಈತನ ಸಂಕೀರ್ಣಕ್ಕೆ ಒಳಪಟ್ಟು

ಈಗಿನ ಕೋಟೆಯ ಒಳಭಾಗದಲ್ಲಿ ಗೃಹವಾಸ್ತವ್ಯಗಳು, ರಕ್ಷಣಾ ಕಟ್ಟಡಗಳ ಬೆಳವಣಿಗೆಗೆ ಮಾತ್ರ ಸೀಮಿತಗೊಂಡಿತು. ಇವನ ಆಳ್ವಿಕೆಯ ಪ್ರಭಾವದಿಂದ ನಗರಕ್ಕೆ ಈತನ ಹೆಸರಿನಿಂದ "ಮುಸ್ತಫಾಬಾದ" ಎಂದು ಕರೆಯಲಾಯಿತು.[೧೧] ಇವನ ನಂತರ ಬೆಳಗಾವಿಯು ವಿಜಾಪುರ ಆದಿಲ್‌ಶಾಹಿಗಳ ಆಡಳಿತಕ್ಕೆ ಒಳಪಟ್ಟು ನಗರದ ಕೇಂದ್ರಭಾಗವಾದ ದರ್ಬಾರಗಲ್ಲಿ ದೇಶಪಾಂಡೆ ಗಲ್ಲಿ, ಬಾಷಿಬನ್, ಬೆಂಡಿ ಬಜಾರ್, ಕಾಕತಿವೇಸ್, ಪ್ರದೇಶಗಳಲ್ಲಿ ಜನವಸತಿ ಬೆಳೆಯಲು ಕಾರಣರಾದರು.

ತರುವಾಯ ಬಿಜಾಪುರದ ಆದಿಲ್ ಶಾಹಿಗಳ ಸರದಾರನಾದ ಅಸದಖಾನ ಕ್ರಿ.ಶ,೧೫೧೧–೧೫೪೯ ರ ಅವಧಿಯಲ್ಲಿ ಬೆಳಗಾವಿಯ ಜಹಗೀರದಾರನಾಗಿ ನೇಮಕಗೊಂಡ ನಂತರ ಬೆಳಗಾವಿ ಹಂತ–ಹಂತವಾಗಿ ನಗರ ನಿರ್ಮಾಣ ಸ್ವರೂಪ ಪಡೆಯಿತು. ಈ ಕಾಲಘಟ್ಟದಲ್ಲಿ ಕೋಟೆಯ ಭಾಗವು ಮರು ನವೀಕರಣಗೊಂಡು ಕೋಟೆಯ ಒಳಭಾಗದಲ್ಲಿ ಹಲವಾರು ಕಟ್ಟಡಗಳು ಆಡಳಿತ ಅನಕೂಲಕ್ಕಾಗಿ ನಿರ್ಮಾಣಗೊಂಡಿವೆ. ಉದಾ: ಸಫಾ–ಈ–ಮಸೀದಿ, ಅರಮನೆ, ದರ್ಗಾ. ಮಹಲ್‌ಗಳು ನಿರ್ಮಾಣಗೊಂಡವು. ಈಗಿನ ಕೋಟೆಯ ಉತ್ತರ ಭಾಗವು ಹಾಗೂ ಪಶ್ಚಿಮ ದ್ವಾರಭಾಗದ ಸುತ್ತಮುತ್ತಲಿನ ಪಿ.ಬಿ. ರಸ್ತೆಯ ಬದಿಗಳಲ್ಲಿನ ಗೃಹ ವಾಸ್ತವ್ಯಗಳು ನಿರ್ಮಾಣಗೊಂಡವು.[೧೨] ಈಗಿನ ಕೋಟೆಯ ಪಶ್ಚಿಮ ದ್ವಾರಭಾಗದ ಸುತ್ತಮುತ್ತಲಿನ ಬ್ರಿಟಿಷ ಕಂಟೆನ್‌ಮೆಂಟ್ (ಲಷ್ಕರ್ ಭಾವಣಿ) ಪ್ರದೇಶವು ವಿಶಾಲವಾದ ಯುದ್ಧದ ರಣಭೂಮಿಯಾಗಿತ್ತು. ಎಂದು ಸ್ಥಳೀಯ ಐತಿಹ್ಯಗಳಿಂದ ತಿಳಿಯಬಹುದಾಗಿದೆ. ಇದಕ್ಕೆ ಸಾಕ್ಷಿ ಎಂಬಂತೆ ನಗರದ ಸುತ್ತಮುತ್ತಲಿನ ಹಲವು ಭಾಗಗಳಲ್ಲಿ ದರ್ಗಾಗಳು, ಮಸೀದಿಗಳು ಹಾಗೂ ಖಬರಸ್ತಾನ ಪ್ರದೇಶಗಳು ರಚನೆಗೊಂಡಿವೆ. ಅಸದಖಾನ ಆಳ್ವಿಕೆಯಲ್ಲಿ ರಾಜಹಂಸಗಡ ಕೋಟೆಯು ಪುನರ್ ನವೀಕರಣಗೊಂಡಿದೆ.

ಅಸದಖಾನ ನಂತರ ಆಳಿದ ಶೇರಖಾನ ಮತ್ತು ಕೈಸರಖಾನ(ಅಸದಖಾನನ ಮಗ)ನ ಆಳ್ವಿಕೆಯ ಕಾಲದಲ್ಲಿ ಬೆಳಗಾವಿಯು ಪ್ರದೇಶ ಹಾಗೂ ಜನಸಾಂದ್ರತೆಯ ದೃಷ್ಟಿಯಿಂದ ವಿಸ್ತರಣೆ ಹೊಂದಿ ಈಗಿನ ಪ್ರಮುಖ ಜನನಿಬಿಡಿತ ಹಾಗೂ ವ್ಯಾಪಾರ ಮಾರುಕಟ್ಟೆ ಸಂಕೀರ್ಣ ಪ್ರದೇಶವಾದ ಶಹಪುರ ಭಾಗವು ಹಳೆ ಬೆಳಗಾವಿ ಮತ್ತು ವಡಗಾಂವ, ಮಾಧವಾಪುರದ ಪೂರ್ವಭಾಗದಲ್ಲಿ ಶಹಪೂರದ ಸುತ್ತಮುತ್ತಲಿನ ಭಾಗವು ಶೇರಖಾನ ಆಳ್ವಿಕೆಯಲ್ಲಿ ಅಭಿವೃದ್ಧಿಗೊಂಡಿತು. ಬೆಳಗಾವಿಯ ಒಂದು ಉಪನಗರವಾಗಿರುವ ಶಹಪೂರ ಭಾಗವು ಬೆಳಗಾವಿಯು ಆಡಳಿತದ ಪ್ರಮುಖ ಕೇಂದ್ರವಾಗಿದೆ. ಬೆಳಗಾವಿಯ ದಕ್ಷಿಣಭಾಗಕ್ಕೆ ಹಬ್ಬಿಕೊಂಡಿರುವ ಈ ಪ್ರದೇಶವು ೧೬ನೇ ಶತಮಾನದ ಪ್ರಮುಖ ಪಟ್ಟಣವೆನಿಸಿದೆ.

ಈತ ಶಹಾಪುರದಲ್ಲಿ ಶಹಪೇಟ ಎಂಬ ಬಡಾವಣೆಯನ್ನು ನಿರ್ಮಿಸಿದನು. ಮುಂದೆ ಅದು ಒಂದು ದೊಡ್ಡ ವಾಣಿಜ್ಯ ಮಾರುಕಟ್ಟೆಯಾಗಿ ಅಭಿವೃದ್ಧಿಗೊಂಡಿತು. ಈ ವ್ಯಾಪಾರ ಕೇಂದ್ರದ ಸುತ್ತಲೂ ಕಲ್ಲಿನ ಕೋಟೆಯನ್ನು ನಿರ್ಮಿಸಿದನು. ಇಲ್ಲಿ ವಿದೇಶಿಯರು ವಜ್ರ ಬಂಗಾರ, ಬೆಳ್ಳಿ ಮತ್ತು ರತ್ನಗಳ ವ್ಯಾಪರ ವಹಿವಾಟು ನಡೆಯುತ್ತಿತ್ತು ಎಂದು ಈ ಪ್ರದೇಶಕ್ಕೆ ಭೇಟಿ ನೀಡಿದ ವಿದೇಶಿ ಪ್ರವಾಸಿಗರಿಂದ ತಿಳಿದುಬರುತ್ತದೆ. ಆಧುನಿಕತೆ ಪ್ರಭಾವದಿಂದ ಇಲ್ಲಿ ಯಾವುದೇ ಕೋಟೆಯ ಅವಶೇಷಗಳು ಕಂಡು ಬರುವುದಿಲ್ಲ, ಆತ ನಿರ್ಮಿಸಿದ ಮಸೀದಿಗಳು, ಮಾರುಕಟ್ಟೆ, ಕೈಗಾರಿಕೆಗಳು ಈಗಲೂ ಮುಂದುವರಿದಿವೆ. ಇದು ಅಂದಾಜು ೨ ಚ.ಕಿ.ಮೀ. ವಿಸ್ತೀರ್ಣತೆ ಹೊಂದಿರಬಹುದಾಗಿದೆ.[೧೩]

ವಿಜಾಪುರ ಆದಿಲ್‌ಶಾಹಿಗಳ ಆಳ್ವಿಕೆ ಅಂತ್ಯಗೊಂಡ ನಂತರ ಕ್ರಿ.ಶ ೧೬೮೬ ರಲ್ಲಿ ಬೆಳಗಾವಿಯು ದೆಹಲಿ ಸುಲ್ತಾನ ಔರಂಗಜೇಬನ ಆಳ್ವಿಕೆಗೆ ಒಳಪಟ್ಟು ತನ್ನ ಎರಡನೇ ಮಗನಾದ ಮುಆಜಂನನ್ನು ದಕ್ಷಿಣದ ಭಾಗಗಳ ಪ್ರಾಂತಾಧಿಕಾರಿಯಾಗಿ ನೇಮಕಗೊಳಿಸಿದನು.[೧೪] ಆಗ ಬೆಳಗಾವಿಯು ಆತನ ಅಧೀನಕ್ಕೆ ಒಳಪಟ್ಟು ನಗರವನ್ನು ಈತನ ಹೆಸರಿನಿಂದಲೇ ಕರೆಯಲಾಗುತ್ತಿತ್ತು. ಈಗಲು ಕೂಡಾ ಬೆಳಗಾವಿ ನಗರದ ಪಶ್ಚಿಮ ಪ್ರದೇಶಗಳಾದ ಚವಾಟಗಲ್ಲಿ, ಖಾಸಭಾಗ, ಕಂಗರಾಳಗಲ್ಲಿ, ದರಬಾರಗಲ್ಲಿ, ಬಾಂದೂರಗಲ್ಲಿ, ಬಸವನಗಲ್ಲಿಯನ್ನು ಒಳಗೊಂಡ ಪ್ರದೇಶಕ್ಕೆ 'ಆಜಂನಗರ' ಎಂದು ಕರೆಯಲಾಗುತ್ತದೆ. ಇಲ್ಲಿ ಆಡಳಿತಗಾರರ ಹಾಗು ಜನಸಾಮಾನ್ಯರ ವಸತಿ ನೆಲೆಗಳು ಹಾಗೂ ಸರದಾರರ ದರ್ಬಾರಕೊಠಡಿ, ಮಹಲ್‌ಗಳು ನಿರ್ಮಾಣಗೊಂಡಿವೆ. ಅಜಂನಗರ ಭಾಗದಲ್ಲಿ ಮುಸ್ಲಿಂ ಭಾಂದವರು ಹೆಚ್ಚಾಗಿ ನೆಲೆಸಿದ್ದಾರೆ. ೨೦ ಬೆಳಗಾವಿ ನಂತರ ಕಾಲಘಟ್ಟದಲ್ಲಿ ಪೇಶ್ವೆ ಹಾಗೂ ನವಾಬರ ಆಳ್ವಿಕೆಗೆ ಒಳಪಟ್ಟು ಶಹಪುರ ವಿಭಾಗದ ವೆಂಕಟೇಶ ನಗರ, ವಡಗಾಂವ. ಆನಗೋಳ ಪ್ರದೇಶದಲ್ಲಿ ಮರಾಠರು ಆಳ್ವಿಕೆ ಮಾಡಿದ್ದರಿಂದ ಇಲ್ಲಿ ಮರಾಠಿ ಭಾಷಿಕರ ಪ್ರಭಾವ ಹೆಚ್ಚಾಗಿ ಕಂಡುಬರುವುದು.[೧೫]

ಒಂದು ಶತಮಾನದ ಮುಂಚೆ ಬೆಳಗಾವಿ, ವಡಗಾಂವ, ಶಹಪೂರ, ಪ್ರತ್ಯೇಕ ಪಟ್ಟಣ ಗಳೆನೆಸಿದ್ದರೆ ಇಂದು ಈ ಮೂರು ಪಟ್ಟಣಗಳು ಏಕಭವಿಸಿ ಒಂದು ಮಹಾನಗರವಾಗಿ ರೂಪುಗೊಂಡಿದೆ. ಈಗಲೂ ಈ ನಗರ ಗರ್ಭದಲ್ಲಿ ಕನಿಷ್ಟ ಎಂಟು ಹರಿಜನ ಕೇರಿಗಳನ್ನು ಗುರಿತಿಸಬಹುದು. ಚವಾಟಗಲ್ಲಿ, ಕಂಗ್ರಾಳಗಲ್ಲಿ, ಗೊಂದಳಿಗಲ್ಲಿ, ಕೋನವಾಳಗಲ್ಲಿ, ಬಾಂಧೂರಗಲ್ಲಿ, ಹೊಸೂರ, ಖಾಸಭಾಗ, ಶಹಪೂರ, ವಡಗಾಂವಿ ಭಾಗಗಳಲ್ಲಿ ಪ್ರತ್ಯೇಕವಾಗಿ ಒಂದೊಂದು ದಲಿತರ ಕೇರಿಗಳು ಈಗಲೂ ಅಸ್ತಿತ್ವದಲ್ಲಿವೆ. ಇವರಲ್ಲಿ ಕನಿಷ್ಟ ಎಂಟೂ ಊರುಗಳು ಆದರೂ ಇಂದಿನ ಬೆಳಗಾವಿಯಲ್ಲಿ ಸಮಾವೇಶಗೊಂಡಿರುವುದು ಉಚಿತವಾಗುತ್ತದೆ.[೧೬]

ಶಿಲಾಯುಗ ಕಾಲದಿಂದಲೂ ಮಾನವನ ಪ್ರಮುಖ ನೆಲೆಯಾದ ಬೆಳಗಾವಿಯು ಕರ್ನಾಟಕದ ಚರಿತ್ರೆಗೆ ತನ್ನದೇ ಆದ ಕೊಡುಗೆಯನ್ನು ನೀಡಿದೆ. ರಾಜಕೀಯವಾಗಿ ಮತ್ತು ಸಾಂಸ್ಕೃತಿವಾಗಿ ಮಹತ್ವದ ಅಧ್ಯಾಯವಾಗಿದೆ. ಸುಮಾರು ಐದು ಲಕ್ಷವರ್ಷಗಳಿಂದ ಇತ್ತೀಚಿನವರೆಗೆ ಮಾನವ ನೆಲೆಸಿದ ಕುರುಹುಗಳನ್ನು ಸ್ಪಷ್ಟವಾಗಿ ತಿಳಿಸಿಕೊಡುವ ಹಲವಾರು ಪ್ರಾಚ್ಯಾವಶೇಷಗಳು, ಸ್ಮಾರಕಗಳು, ಶಾಸನಗಳು ಮುಂತಾದ ಆಕರಗಳು ಬೆಳಗಾವಿಯ ರಾಜಕೀಯ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತವೆ.

## ಪೌರಾಣಿಕ ಹಿನ್ನೆಲೆ

ಬೆಳಗಾವಿಯು ಪೌರಾಣಿಕವಾಗಿ ಮಹತ್ವ ಪಡೆದ ಪ್ರದೇಶವಾಗಿದೆ. ಇಲ್ಲಿರುವ ಅನೇಕ ಸ್ಥಳಗಳಲ್ಲಿ ಪರಂಪರೆಗೆ ಸಂಬಂಧಿಸಿದ ಕುರುಹುಗಳು ದೊರೆಯುತ್ತವೆ. ಬೆಳಗಾವಿ ಜಿಲ್ಲೆಯಲ್ಲಿ ರಾಮಾಯನಕ್ಕೆ ಸಂಬಂಧಿಸಿದ ಐದು ಪ್ರದೇಶಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಅವುಗಳಲ್ಲಿ ಬೆಳಗಾವಿ ಹತ್ತಿರದ ಕಣಬರಗಿ ಶ್ರೀರಾಮಚಂದ್ರನಿಂದ ಪಾವನಗೊಂಡಂತಹ ಪ್ರದೇಶವಾಗಿದೆಯೆಂದು ದಾಖಲಾಗಿದೆ.[೧೯]

## ಪ್ರಾಗೈತಿಹಾಸಕಾಲ

ಶಿಲಾಯುಗದ ಕಾಲವನ್ನು ಪ್ರಾಗೈತಿಹಾಸ ಕಾಲವೆಂದು ಕರೆಯಲಾಗುತ್ತದೆ. ಬೆಳಗಾವಿಯ ಪ್ರದೇಶದ ಪ್ರಾಕೃತಿಕ ಪ್ರಭಾವದಿಂದ ಆದಿ ಶಿಲಾಯುಗದ ಮಾನವ ಈ ಭಾಗದಲ್ಲಿ ನೆಲೆಸಿರುವ ಕುರುಹಗಳನ್ನು ಇತ್ತೀಚಿನ ಸಂಶೋಧನೆಗಳಿಂದ ದೃಢಪಡಿಸಲಾಗಿದೆ. ಬೆಳಗಾವಿಯ ನಗರದ ಆಗ್ನೇಯ ದಿಕ್ಕಿಗೆ ಸುಮಾರು ಐದು ಕಿ.ಮೀ. ಅಂತರದಲ್ಲಿ ಒಂದು ಹಳ್ಳದ ಬದಿ ವಿಶಿಷ್ಟ ಪ್ರಕಾರದ ಕೈಗೊಡಲಿಯನ್ನು ರಾಬರ್ಟ ಬ್ರೂಸಫೂಟ ಎಂಬುವರು ಸಂಶೋಧಿಸಿರುವರು. ಈ ಕೈಗೊಡಲಿಯನ್ನು ಹಳೆಶಿಲಾಯುಗದ ಸಂಸ್ಕೃತಿಯ ಮಾನವ ವಿವಿಧ ಕಾಲಘಟ್ಟಗಳಲ್ಲಿ ಬಳಸಿದ ಶಿಲಾ ಉಪಕರರಣಗಳ ತಂತ್ರಗಾರಿಕೆಯನ್ನು ಆಧರಿಸಿ ಕ್ರಿಶ ಪೂ. ೨೦೦೦-೧೦೦೦ ಅವಧಿಗೆ ಸಂಬಂಧಿಸಿದ (ನೂತನ ಶಿಲಾಯುಗ ಸಂಸ್ಕೃತಿ) ಅವಶೇಷವೆಂದು ವರದಿ ಮಾಡಿದ್ದಾರೆ.[೨೦]

ಬೆಳಗಾವಿ ನಗರದಲ್ಲಿ ಇತಿಹಾಸಪೂರ್ವ ಕಾಲದ ಮತ್ತೊಂದು ನೆಲೆಯನ್ನು ಈಗಿನ ರೇಲ್ವೆ ಸ್ಟೇಶನ್ನಿನ ಉತ್ತರಬದಿಯಲ್ಲಿ ಗುರುತಿಸಲಾಗಿದೆ. ಇಲ್ಲಿ ದೊರೆತ ಕೆಲವು ಅವಶೇಷಗಳಿಂದ ಇದು ನಗರ ಸಂಸ್ಕೃತಿಗೆ ಸಂಬಂಧಿಸಿದ ನೆಲೆ ಎನ್ನಲಾಗಿದೆ. ಈ ಪ್ರದೇಶದಲ್ಲಿ ಅತೀ ಪ್ರಾಚೀನ ಜಾಡಿಯ ಅವಶೇಷಗಳು ಕಂಡು ಬರುತ್ತವೆ. ಈ ಪ್ರದೇಶದಲ್ಲಿ ಶಾತವಾಹನರ ಕಾಲಕ್ಕಿಂತ ಪೂರ್ವದಲ್ಲಿ ಜನವಸತಿ ನೆಲೆ ಇದ್ದಿರಬಹುದು. ಬಹುಶಃ ಈ ನೆಲೆ ನಾಗರ ಸಂಸ್ಕೃತಿಗೆ ಸಂಬಂಧಿಸಿರಬಹುದೆಂದು ಡಾ. ಎಮ್. ಬಿ. ನೇಗಿನಹಾಳ ಅವರು ಅಭಿಪ್ರಾಯಪಟ್ಟಿದ್ದಾರೆ.[೨೧]

## ಪ್ರಾಚೀನ ಇತಿಹಾಸ ಕಾಲ

ಕರ್ನಾಟಕವನ್ನಾಳಿದ ಬಹುತೇಕ ಪ್ರಾಚೀನ ರಾಜಮನೆತನಗಳು ಬೆಳಗಾವಿಯನ್ನು ತಮ್ಮ ರಾಜ್ಯದ ಒಂದು ಪ್ರಮುಖ ಆಡಳಿತ ವಿಭಾಗವಾಗಿ ಮಾಡಿಕೊಂಡು ಆಳ್ವಿಕೆ ಮಾಡಿದ್ದಾರೆ. ಅವುಗಳಲ್ಲಿ ಪ್ರಮುಖ ಅರಸು ಮನೆತನಗಳಾದ ಶಾತವಾಹನರು, ಭೋಜರು, ಆದಿ ಕದಂಬರು, ಕಲ್ಯಾಣ ಚಾಳುಕ್ಯರು, ರಾಷ್ಟ್ರಕೂಟರು, ಈ ಪ್ರದೇಶದ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯ ಬೆಳವಣಿಗೆಗೆ ಕಾರಣಕರ್ತರಾಗಿದ್ದಾರೆ.

## ಮೌರ್ಯರು

ಪ್ರಾಚೀನ ಭಾರತದ ಇತಿಹಾಸದಲ್ಲಿ ಉಜ್ವಲವಾದ ನೂತನ ಯುಗ ಪ್ರಾರಂಭವಾಗುವುದು ಮೌರ್ಯ ಸಾಮ್ರಾಜ್ಯದ ಸ್ಥಾಪನೆಯಿಂದ ಇವರ ಆಳ್ವಿಕೆಯ ಕಾಲಘಟ್ಟದಲ್ಲಿ ಮಧ್ಯ ಭಾರತದ ಹಲವು ಪ್ರದೇಶಗಳು ಮೌರ್ಯರ ಆಳ್ವಿಕೆಗೆ ಒಳಪಟ್ಟಿದ್ದು, ಅದರಲ್ಲಿ ಬೆಳಗಾವಿಯ ಪ್ರದೇಶವು ಒಳಪಟ್ಟಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೨೨] ಮೌರ್ಯ ಸಾಮ್ರಾಜ್ಯದ ಸ್ಥಾಪಕನಾದ ಚಂದ್ರಗುಪ್ತನು ತನ್ನ ಸಹಚರರ ಜೊತೆಗೆ ಶ್ರವಣಬೆಳಗೊಳಕ್ಕೆ ತೆರಳುವಾಗ ಬೆಳಗಾವಿಯಲ್ಲಿ ಆತ ತಂಗಿದ್ದನು ಎಂದು ಆರ್.ಎಂ.ಷಡಕ್ಷರಯ್ಯನವರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಅದಕ್ಕೆ ಯಾವುದೇ ಪುರಾವೆಗಳಿಲ್ಲ.[೨೩]

ಮತ್ತೊಂದು ಐತಿಹ್ಯದ ಪ್ರಕಾರ ಜಕ್ಕದೇವ ಎಂಬ ಅರಸನು ಬೆಳಗಾವಿಯಲ್ಲಿ ಮಣ್ಣಿನ ಕೋಟೆಯನ್ನು ಕಟ್ಟಿಕೊಂಡು ೮೦೦ ಹಳ್ಳಿಗಳಿಗೆ ಒಡೆಯನಾಗಿ ಆಳುತ್ತಿದ್ದನು. ಎಂಬ ವಿಚಾರವನ್ನು ಬಿ. ಆರ್. ಹಂದೂರ ಅವರು ಅಭಿಪ್ರಾಯಪಟ್ಟಿದ್ದಾರೆ.[೨೪]

## ಶಾತವಾಹನರು

ಶಾತವಾಹನರು ಮೌರ್ಯರ ಪತನಾ ನಂತರ ದಕ್ಷಿಣ ಭಾರತದಲ್ಲಿ ಸ್ವತಂತ್ರ ರಾಜ್ಯ ಸ್ಥಾಪಿಸಿ ಕರ್ನಾಟಕದ ಬಹುಭಾಗ ಪ್ರದೇಶವನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಂಡಿದ್ದರು. ಬೆಳಗಾವಿ ನಗರದಲ್ಲಿ ಶಾತವಾಹನರ ನೆಲೆಯ ಕುರುಹುವನ್ನು ಕ್ರಿ. ಶ.೧೯೪೫ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನೆ ಸಂಸ್ಥೆಯ ನಿರ್ದೇಶಕರಾದ ಆರ್. ಎಸ್. ಪಂಚಮುಖಿಯವರು ಬೆಳಕಿಗೆ ತಂದರು. ನಗರದ ಹೊರವಲಯವಾದ ವಡಗಾಂವ ಮಾಧವಪುರದಲ್ಲಿ ಪಂಚಮುಖಿ ಯವರು ಶಾತವಾಹನರ ಅರಸೊತ್ತಿಗೆ ಕಾಲದ ಇಟ್ಟಿಗೆಯಿಂದ ನಿರ್ಮಿಸಿದ ಕಟ್ಟಡಗಳಿದ್ದ ಒಂದು ಪ್ರಾಚೀನ ಜನವಸತಿ ನೆಲೆಯನ್ನು ಶೋಧಿಸಿದರು.[೨೫] ನಂತರ

ಈ ನೆಲೆಯನ್ನು ಕ್ರಿ.ಶ.೧೯೭೭-೭೮ ರಲ್ಲಿ ಅ. ಸುಂದರವರು ಉತ್ಖನನವನ್ನು ಕೈಕೊಂಡು ಸುಮಾರು ಕ್ರಿಶಪೂ. ೩೩೦೦ ರಿಂದ ೨೦೦ರ ಕಾಲದ ಒಂದು ಪ್ರಮುಖ ಪಟ್ಟಣದ ಅವಶೇಷ ಗಳನ್ನು ಬೆಳಕಿಗೆ ತಂದರು. ಇವು ಆ ಕಾಲಘಟ್ಟದಲ್ಲಿನ ನಾಗರಿಕತೆಯ ಜೀವನ ಶೈಲಿಯ ಒಂದು ಸ್ಥೂಲ ಪರಿಚಯವನ್ನು ಮಾಡಿಸುತ್ತವೆ.

ವಿಶಾಲವಾದ ಬೀದಿಗಳು, ಇಟ್ಟಿಗೆಯಿಂದ ನಿರ್ಮಿಸಿದ ದೊಡ್ಡ ದೊಡ್ಡ ಸೌಧಗಳು, ಕನಿಷ್ಟ ಎರಡು ಕೊಠಡಿಯ ಮೊಗಸಾಲೆ ಮತ್ತು ಹಿಂಬದಿಯಿಂದ ನೀರಿನ ಬಾವಿಯನ್ನು ಒಳಗೊಂಡ ವಾಸದ ಮನೆಗಳು ಧಾನ್ಯ ಕಣಜ ಅವಶೇಷಗಳು ದೊರೆತಿವೆ. ಇದು ಒಂದು ಪ್ರಮುಖ ಮಹಾನಗರವಾಗಿದ್ದು ಇಲ್ಲಿ ದೈನಂದಿನ ಜೀವನಕ್ಕಾಗಿ ನಾನಾ ಆಕಾರಗಳ ಮೃತ್ಪಾತ್ರೆಗಳನ್ನು ಬಳಸಲಾಗುತಿತ್ತು ಎಂಬ ವಿಚಾರವನ್ನು ಅಲ್ಲಿ ದೊರೆತ ಅವಶೇಷಗಳನ್ನು ಆಧರಿಸಿ ಒಂದು ಬೃಹತ್ ಜನವಸತಿ ನೆಲೆಯಾಗಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಅಷ್ಟೇ ಅಲ್ಲದೇ ಅಲಂಕಾರಪ್ರಿಯ ವಸ್ತುಗಳನ್ನು ಹಾಗೂ ದಂತದ ಪಗಡೆ ದಾಳಗಳು, ಮಕ್ಕಳ ಮಣ್ಣಿನ ಆಟನಿಕೆಗಳು, ಪ್ರನಾಳವಿದ್ದ ಶಿವಲಿಂಗ, ಗಾಂಧಾರ ಶೈಲಿಯ ಉಷ್ಣೀಶವುಳ್ಳ ಹಾಗು ಉದ್ದನೆಯ ಕಿವಿಗಳನ್ನು ಹೊಂದಿದ ಬುದ್ಧನ ತಲೆಯ ಟೊಳ್ಳು ಗೊಂಬೆಗಳು ದೂರದ ದೇಶದ ಗಾಂಧಾರ ಶೈಲಿಯ ಕಲಾತ್ಮಕತೆಯನ್ನು ಈ ವಸ್ತುಗಳು ಪರಿಚಯ ಮಾಡಿಕೊಡುತ್ತವೆ.

ಶಾತವಾಹನರ ಕಾಲದಲ್ಲಿ ದೊರೆತ ಸತುವಿನ ನಾಣ್ಯಗಳ ಮೇಲೆ ಶ್ರೀ ಶಾತಕರ್ಣಿ, ಗೌತಮಿ, ಯಜ್ಞಶ್ರೀ ಎಂದು ಉಲ್ಲೇಖಿಸಲಾಗಿದೆ. ಶಾತವಾಹನರ ನಾಣ್ಯಗಳ ಮೇಲೆ ಪ್ರಾಕೃತ ಭಾಷೆ, ಬ್ರಾಹ್ಮಿಲಿಪಿಯನ್ನು ಬಳಸಲಾಗುತ್ತಿತ್ತು. ಈ ಎಲ್ಲ ಅವಶೇಷಗಳನ್ನು ಆಧರಿಸಿ ವಿದ್ವಾಂಸರು ಈ ನೆಲೆಯು ಪ್ರಾಚೀನ ಕಾಲದ ಪ್ರಸಿದ್ಧ ವ್ಯಾಪಾರ ಕೇಂದ್ರವನ್ನು ಹೊಂದಿದ ಪಟ್ಟಣವಾಗಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ.[೨೬]

**ಭೋಜರು**

ಯಾದವರ ಉಪಶಾಖೆಯಾದ ಐಹೈಯ ಕುಲಕ್ಕೆ ಸೇರಿದ ಭೋಜರು ಉತ್ತರ ಕನ್ನಡ ಜಿಲ್ಲೆಯ ಬೈಂದೂರನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ಮಾಡಿದರು. ಇವರ ರಾಜ್ಯವು ಗೋವಾ, ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆಯಿಂದ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕು ಪ್ರದೇಶದವರೆಗೆ ತಮ್ಮ ರಾಜ್ಯವನ್ನು ವಿಸ್ತರಿಸಿದ್ದರೆಂದು ಕಾಣುತ್ತದೆ. ಆದರೆ ಇವರ ಕಾಲಘಟ್ಟದ ಯಾವದೇ ಕುರುಹುಗಳು ಬೆಳಗಾವಿ ಪ್ರದೇಶದಲ್ಲಿ ದೊರೆತಿರುವುದಿಲ್ಲ ಎಂದು ಡಾ. ಷಡಕ್ಷರಯ್ಯನವರು ಅಭಿಪ್ರಾಯಪಟ್ಟಿದ್ದಾರೆ.[೨೭]

## ಆದಿ ಕದಂಬರು

ಬನವಾಸಿ ಕದಂಬರನ್ನು ಆದಿ ಕದಂಬರೆಂದು ಕರೆಯಲಾಗುತ್ತದೆ. ಕದಂಬರು ಬನವಾಸಿಯನ್ನು ತಮ್ಮ ರಾಜಧಾನಿಯಾಗಿ ಮಾಡಿಕೊಂಡು ಸುಮಾರು ಎರಡು ಶತಮಾನಗಳ ಕಾಲ ರಾಜ್ಯಭಾರ ಮಾಡಿದರು. ಕದಂಬರ ಉಪರಾಜಧಾನಿಯಾದ ಪಲಾಶಿಕದಲ್ಲಿ(ಹಲಸಿ) (ಖಾನಾಪೂರ ತಾ.) ಕಾಕುತ್ಸವರ್ಮನು ಯುವರಾಜನಾಗಿ ಈ ಭಾಗದಲ್ಲಿ ಆಳ್ವಿಕೆ ಮಾಡಿದ ಕುರುಹುಗಳು ದೊರೆಯುತ್ತವೆ. ಆದಿ ಕದಂಬರ ಸುಮಾರು ೫೧ ಶಾಸನಗಳಲ್ಲಿ ೬ ತಾಮ್ರಪಟ ಶಾಸನಗಳು ಹಲಸಿಯಲ್ಲಿ ದೊರತಿವೆ. ಬೆಳಗಾವಿ ಪ್ರದೇಶವು ಹಲಸಿಯ ಒಂದು ಭಾಗವಾಗಿ ಆಳ್ವಿಕೆಗೆ ಒಳಪಟ್ಟಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಕದಂಬರ ಕಾಲದ ಯಾವುದೇ ಕುರುಹುಗಳು ಬೆಳಗಾವಿ ನಗರ ಭಾಗದಲ್ಲಿ ಕಂಡು ಬರುವುದಿಲ್ಲ.[೨೮]

## ಬಾದಾಮಿ ಚಾಲುಕ್ಯರು

ಕದಂಬರನ್ನು ಮೂಲೆಗೊತ್ತಿ ಚಾಲುಕ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದ ಬಾದಾಮಿ ಚಾಲುಕ್ಯರು. ಬಾದಾಮಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದರು. ಬೆಳಗಾವಿ ಜಿಲ್ಲೆಯ ಸುತ್ತಮುತ್ತಲಿನ ಭಾಗದಲ್ಲಿ ಚಾಲುಕ್ಯರ ಹಲವು ಪುರಾವೆಗಳು ದೊರತಿವೆ. ಆದರೆ ಬೆಳಗಾವಿ ಪ್ರದೇಶದಲ್ಲಿ ಅವರ ಇತಿಹಾಸ ಕುರಿತು ಪ್ರಾಸ್ಥಾಪಿಸುವ ಯಾವುದೇ ಪುರಾವೆಗಳು ದೊರತಿರುವುದಿಲ್ಲವೆಂದು ಅಭಿಪ್ರಾಯಸಲಾಗಿದೆ.[೨೯]

## ರಾಷ್ಟ್ರಕೂಟರು(ಕ್ರಿ.ಶ.೭೫೬–೯೭೩)

ಬಾದಾಮಿ ಚಾಳುಕ್ಯರನ್ನು ಸೋಲಿಸಿ ರಾಷ್ಟ್ರಕೂಟರು ಸುಮಾರು ಎರಡು ಶತಮಾನಗಳ ಕಾಲ ಕರ್ನಾಟಕದ ಬಹುಭಾಗವನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಂಡಿದ್ದರು. ಅವರು ಮಾನ್ಯಕೇಟವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದರು. ಅವರ ಕಾಲದ ಹಲವಾರು ಶಾಸನಗಳು ಬೆಳಗಾವಿ ಪ್ರದೇಶದಲ್ಲಿ ದೊರೆತಿವೆ. ಅವುಗಳಲ್ಲಿ ಪ್ರಮುಖವಾಗಿ ಮುಮ್ಮಡಿ ಗೋವಿಂಧನ(ಕ್ರಿ.ತ. ೭೯೫–೮೧೪) ಕಾಲದ ತಾಮ್ರ ಶಾಸನವೊಂದು ನೇಸರಗಿ ದೊರೆತಿದ್ದು ಆ ಶಾಸನದಲ್ಲಿ ಚಂದಗಡ ವಿಷಯದ ನೇಸರಿಕೆಯ ಭೂಮಿಯನ್ನು ಇಕ್ಷುಗ್ರಾಮದ (ಬೆಳಗಾವಿ) ವಾಸಿ ಪ್ರಭವಚಂದ್ರ ಚತುರ್ವೇದಿಯ ಮಗ ಶಿವನಾಗಭಟ್ಟನಿಗೆ ಕ್ರಿ.ಶ.೮೦೫ರಲ್ಲಿ ದತ್ತಿ ನೀಡಿದ ವಿವರಣೆ ದಾಖಲಾಗಿದೆ.

ಮುಮ್ಮಡಿ ಕೃಷ್ಣನ ಕ್ರಿ.ಶ.(೯೩೯–೯೬೭) ಕಾಲಘಟ್ಟದಲ್ಲಿ ಪ್ರಮುಖ ಸಾಮಂತರಾಗಿ ರಟ್ಟರು ಬೆಳವಣಿಗೆ ಹೊಂದಿ ಸೊಗಲ ಪ್ರದೇಶದಿಂದ ಆಳ್ವಿಕೆ ಆರಂಭಿಸಿದರು. ಅಷ್ಟೇ ಅಲ್ಲದೇ

ಅಮೋಘವರ್ಷನ ಸೌದತ್ತಿ ಶಾಸನ, ಮುಮ್ಮಡಿ ಇಂದ್ರನ ಅಸೂಟಿ ಶಾಸನಗಳಿಂದ ಬೆಳಗಾವಿಯ ಬಹುಭಾಗ ಅವರ ಅಧೀನಕ್ಕೆ ಒಳಪಟ್ಟಿರಬಹುದೆಂದು ತಿಳಿಯಬಹುದಾಗಿದೆ.[೩೦]

## ಕಲ್ಯಾಣ ಚಾಳುಕ್ಯರು(ಕ್ರಿ.ಶ.೯೭೩ರಿಂದ ೧೧೬೨)

ಬಾದಾಮಿ ಚಾಳುಕ್ಯರ ವಂಶಸ್ಥರಾದ ಕಲ್ಯಾಣ ಚಾಳುಕ್ಯರು ಸುಮಾರು ಎರಡು ಶತಮಾನಗಳ ಕಾಲ ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರು. ಕರ್ನಾಟಕದ ಬಹುಭಾಗವು ಆವರ ಆಳ್ವಿಕೆಗೆ ಒಳಪಟ್ಟಿತ್ತು. ಆ ಅವಧಿಯಲ್ಲಿ ಬೆಳಗಾವಿ ಜಿಲ್ಲೆಯ ಪ್ರಾಚೀನ ಆಡಳಿತ ಕೇಂದ್ರವೆನಿಸಿದ ಕುಹೂಂಡಿ-೩೦೦೦ ವಿಷಯ ಮತ್ತು ಪಲಾಸಿಕ-೧೨೦೦೦ ಮುಂತಾದ ಪ್ರದೇಶಗಳು ಇವರ ಆಡಳಿತದ ಭಾಗಗಳಾಗಿದ್ದವು ಎಂದು ತಿಳಿದುಬರುತ್ತದೆ. ಈ ಭಾಗಗಳನ್ನು ಕಲ್ಯಾಣ ಚಾಲುಕ್ಯರ ಪ್ರಸಿದ್ಧ ಸಾಮಂತ ಮನೆತನಗಳಾದ ರಟ್ಟರು, ಗೋವೆ ಕದಂಬರು, ಕೊಲ್ಹಾಪುರದ ಶಿಲಾಹಾರರು ಆಳ್ವಿಕೆ ಮಾಡುತ್ತಿದ್ದರು. ಕುಹೂಂಡಿ-೩೦೦೦ ನಾಡನ್ನು ಸೌದತ್ತಿ ರಟ್ಟರು ನೋಡಿಕೊಳ್ಳುತ್ತಿದ್ದರು. ಕುಹುಂಡಿ ಮೂರುಸಾವಿರ ವಿಷಯದಲ್ಲಿ ವೇಳುಗ್ರಾಮ-೭೦ ಎಂಬ ಉಪವಿಭಾಗವಾಗಿ ಆಳಲ್ಪಡುತ್ತಿತ್ತು.[೩೧] ಗೋವೆ ಕದಂಬರ ಶ್ರೇಷ್ಠ ಅರಸನಾದ ಎರಡನೇ ಜಯಕೇಶಿಯು ಮತ್ತು ಅವನ ರಾಣಿ ಮೈಳಲದೇವಿಯು ಕ್ರಿ.ಶ. ೧೧೨೬ರಲ್ಲಿ ಬೆಳಗಾವಿ ಜಿಲ್ಲೆಯ ಕಾದರಹಳ್ಳಿ- ೩೦ ಮತ್ತು ವೇಳುಗ್ರಾಮ -೭೦ ಎಂಬ ಭಾಗಗಳನ್ನು ಆಳುತ್ತಿದ್ದರೆಂದು ಕ್ರಿ.ಶ.೧೧೮೮ರ ನರೇಂದ್ರ ಶಾಸನದಿಂದ ತಿಳಿದುಬರುತ್ತದೆ.[೩೨]

## ಕಲಚೂರಿಗಳು

ಕಲ್ಯಾಣಿ ಚಾಳುಕ್ಯರ ಬಹುಕಾಲ ಸಾಮಂತರಾಗಿ ಆಳಿದ ಕಾಕತಿಯ ಕಲಚೂರಿಗಳು ಕಲ್ಯಾಣ ಚಾಲುಕ್ಯರನ್ನು ಕ್ರಿ.ಶ.೧೧೬೧ರಿಂದ ೧೧೬೭ರಲ್ಲಿ ಜೋಗಮರಸ ಪುತ್ರನಾದ ಪೆರ್ಮಾಡಿಯು ಸೋಲಿಸಿ ಸ್ವತಂತ್ರ ರಾಜನಾಗಿ ಆಳುತ್ತಿದ್ದನು. ಕರಹಾಡ-೪೦೦೦ ಭಾಗವು ಇವನ ಆಳ್ವಿಕೆಗೆ ಒಳಪಟ್ಟಿತ್ತು. ಕುಹೂಂಡಿ-೩೦೦೦ ಭಾಗವನ್ನು ರಟ್ಟರು ಆಳುತಿದ್ದರು. ರಟ್ಟರು ಕಲಚೂರಿಗಳ ಸಾಮಂತರಾಗಿ ಮುಂದುವರೆದರು. ಹಾಗೂ ಕರಹಾಡ-೪೦೦೦ ಭಾಗವನ್ನು ಯಾದವರು ನೋಡಿಕೊಳ್ಳುತ್ತಿದ್ದರು. ಇವರ ಆಳ್ವಿಕೆಯ ಕಾಲದ ಪುರಾವೆಗಳು ನಗರ ಭಾಗದಲ್ಲಿ ದೊರೆಯುದಿಲ್ಲ.[೩೩]

## ರಟ್ಟರು

ಬೆಳಗಾವಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದ ಅರಸುಮನೆತನಗಳಲ್ಲಿ ಸವದತ್ತಿ ರಟ್ಟರು ಅತ್ಯಂತ ಪ್ರಮುಖರಾಗಿದ್ದಾರೆ. ರಟ್ಟ ವಂಶದ ಎರಡನೆಯ ಶಾಖೆಯಾಗಿ ಕ್ರಿ.ಶ.೯೩೦ರಿಂದ ೧೨೩೦ರ ವರೆಗೆ ಸುಮಾರು ೩ ಶತಮಾನಗಳ ಕಾಲ ಆಳಿದರು. ಮೊದಲು

ಸಾಮಂತರಾಗಿ ನಂತರ ಸ್ವತಂತ್ರ ಆಡಳಿತಗಾರರಾಗಿ ಕುಹೂಂಡಿ-೩೦೦೦(ನಾಡ) ಭಾಗವನ್ನು ಆಳುತ್ತಿದ್ದರು.[೩೪] ರಟ್ಟರು ರಾಷ್ಟ್ರಕೂಟರ, ಕಲ್ಯಾಣ ಚಾಳುಕ್ಯರ, ಹಾಗೂ ಕಲಚೂರಿಗಳ ಸಾಮಂತ ರಾಗಿ ಕುಹೂಂಡಿ-೩೦೦೦ ಭಾಗದಲ್ಲಿ ಆಳ್ವಿಕೆ ಮಾಡಿದರು. ಇವರ ಮೂಲಪುರುಷ(ನನ್ನನು) ಕ್ರಿ.ಶ.೯೩೦ರಿಂದ ೯೮೦)ರವರೆಗೆ ರಾಷ್ಟ್ರಕೂಟರ ಯುವರಾಜನಾದ ಮೂರನೇ ಕೃಷ್ಣನ ಕಾಲದಲ್ಲಿ ಪ್ರಬಲ ಸಾಮಂತನಾಗಿ ಏಳಿಗೆ ಹೊಂದಿ ಸೊಗಲದಿಂದ ಆಳ್ವಿಕೆಯನ್ನು ಪ್ರಾರಂಭಿಸಿದನು.[೩೫] ಕಲ್ಯಾಣದ ಚಾಲುಕ್ಯರು ಎರಡನೆ ತೈಲಪನು ರಾಷ್ಟಕೂಟರನ್ನು ಸೋಲಿಸಿ ಆಳ್ವಿಕೆ ಪ್ರಾರಂಭಿಸಿದಾಗ ಸೌದತ್ತಿ ರಟ್ಟರು ಮುಂದೆ ಹೋಗಿ ಅಧಿಪತ್ಯವನ್ನು ಒಪ್ಪಿಕೊಂಡು ಬೆಂಬಲ ನೀಡಿದರು. ಸಹಾಯ ನೀಡಿದರು.[೩೬] ಆಡಳಿತದ ಅನಕೂಲಕ್ಕಾಗಿ ರಾಜಧಾನಿಯನ್ನು ಸೊಗಲದಿಂದ ಸುಗಂಧವರ್ತಿಗೆ(ಸವದತ್ತಿ) ವರ್ಗಾಯಿಸಿದರು. ಕ್ರಮೇಣವಾಗಿ ರಟ್ಟರು ರಾಜಕೀಯವಾಗಿ ಬೆಳವಣಿಗೆ ಹೊಂದಿ ಕುಹೂಂಡಿ ನಾಡಿನ ಅಭಿವೃದ್ಧಿಗೆ ಕಾರಣಕರ್ತರಾಗಿದ್ದಾರೆ. ಮುಮ್ಮಡಿ ಕಾರ್ತವಿರ್ಯನು ಕ್ರಿಶ.(೧೧೩೦-೧೧೫೩) ಬಿಜ್ಜಳನ ಮಗನಾದ ಸೋವಿದೇವನ ಸಾಮಂತನಾಗಿ ೨೩ ವರ್ಷಗಳ ಕಾಲ ರಾಜ್ಯವಾಳಿದನು. ಕ್ರಿ.ಶ.೧೧೮೪ರಲ್ಲಿ ಒಂದನೇ ಲಕ್ಷ್ಮೀದೇವನು ಹೊಯ್ಸಳರು ಮತ್ತು ಯಾದವರಿಗೆ ಕಲಹ ಏರ್ಪಟ್ಟ ಕಾಲದಲ್ಲಿ ಸ್ವತಂತ್ರವಾಗಿ ಸೌದತ್ತಿಯಿಂದ ಇಕ್ಷುಗ್ರಾಮಕ್ಕೆ (ಬೆಳಗಾವಿ) ರಾಜಧಾನಿಯನ್ನು ವರ್ಗಾಯಿಸಿದನು. ಹಾಗೂ ಸ್ವತಂತ್ರವಾದ ಆಡಳಿತ ಪ್ರಾರಂಭಿಸಿದರು. ಮುಂದೆ ಸಮಗ್ರ ಕುಹೂಂಡಿ ನಾಡನ್ನು ನೋಡಿಕೊಳ್ಳುತ್ತಿದ್ದರು.[೩೭]

ರಟ್ಟರ ಪ್ರಸಿದ್ಧ ಅರಸನಾದ ಒಂದನೇ ಲಕ್ಷ್ಮೀದೇವನು ಕ್ರಿ.ಶ.(೧೧೭೦-೧೧೯೦) ವೇಳುಗ್ರಾಮದ ಮೇಲೆ ಸಾಮಿತ್ವ ಹೊಂದಿದ ಗೋವೆಯ ಕದಂಬರನ್ನು ಸೋಲಿಸಿ ವೇಳುಗ್ರಾಮ-೭೦ ಭಾಗವನ್ನು ವಶಪಡಿಸಿಕೊಂಡು ಸ್ವತಂತ್ರ ರಾಜ್ಯನೆಂದು ಸಾರಿಕೊಂಡನು.[೩೮] ಬೆಳಗಾವಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ನಂತರ ಆಡಳಿತ ಭಾಗವನ್ನು ಮರು ವಿಭಾಗಿಸಿ ವೇಳು ಗ್ರಾಮವನ್ನು-೨೦ಕ್ಕೆ ಒಳಪಡಿಸಲಾಯಿತು.[೩೯] ರಟ್ಟರ ಆಳ್ವಿಕೆಯ ಕಾಲದಲ್ಲಿ ಇಕ್ಷು ಗ್ರಾಮವು ಪ್ರಸಿದ್ಧ ರಾಜಧಾನಿ ಪಟ್ಟಪಡೆದುಕೊಂಡು ಸಾಂಸ್ಕೃತಿಕವಾಗಿ ಮಹತ್ವದ ಬದಲಾವಣೆಗೆ ಕಾರಣವಾಯಿತು. ವೇಳುಗ್ರಾಮ ಪ್ರದೇಶವು ವಾಣಿಜ್ಯ, ಕಲೆ, ಸಾಹಿತ್ಯ, ಧಾರ್ಮಿಕ ಕ್ಷೇತ್ರಗಳಲ್ಲಿ ಅಭಿವೃದ್ಧಿ ಹೊಂದಿ ಇಂದು ಐತಿಹಾಸಿಕವಾದ ಒಂದು ಪ್ರಸಿದ್ಧ ಕೇಂದ್ರವಾಗಿದೆ. ಎರಡನೇಯ ಲಕ್ಷ್ಮೀದೇವನ ಆಳ್ವಿಕೆಯ ಕಾಲದಲ್ಲಿ ಸೇವುಣರ ಸಿಂಘಣನು ಕ್ರಿ ಶ. ೧೨೩೦ರಲ್ಲಿ ವೇಳುಗ್ರಾಮದ ಮೇಲೆ ದಂಡೆತ್ತಿ ಬಂದು ರಟ್ಟರನ್ನು ಸಂಪೂರ್ಣವಾಗಿ ಸೋಲಿಸಿ ಈ ಭಾಗವನ್ನು ವಶಪಡಿಸಿ ಕೊಂಡನು.[೪೦]

## ಮಧ್ಯಕಾಲೀನ ಬೆಳಗಾವಿ ಇತಿಹಾಸ

ರಟ್ಟರ ಅವನತಿಯ ನಂತರ ಬೆಳಗಾವಿಯ ರಾಜಕೀಯ ಇತಿಹಾಸವು ಮತ್ತಷ್ಟು ಸಂದಿಗ್ಧತಿಗೆ ಒಳಗಾಯಿತು. ೧೨ ನೇ ಶತಮಾನದಲ್ಲಿ ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯ ಅವನತಿ ಹೊಂದಿದ ನಂತರ ಬೆಳಗಾವಿ ಪ್ರದೇಶದ ಸ್ವಾಧಿನಕ್ಕಾಗಿ ಹೊಯ್ಸಳರು, ದೇವಗಿರಿ ಯಾದವರು ಮಧ್ಯೆ ಮತ್ತು ಬಹುಮನಿ, ಆದಿಲ್‌ಶಾಹಿಗಳ ವಿರುದ್ಧ ವಿಜಯನಗರ ಸಾಮ್ರಾಜ್ಯದ ಮಧ್ಯೆ ಮೇಲಿಂದ ಮೇಲೆ ಕಲಹಗಳು ನಡೆದು ಬೆಳಗಾವಿ ಪ್ರದೇಶದ ಆಡಳಿತ ಒಂದು ರಾಜ್ಯದಿಂದ ಇನ್ನೊಂದು  ರಾಜ್ಯದ ಅಧೀನಕ್ಕೆ ಹಸ್ತಾಂತರವಾಗತೊಡಗಿತು. ಇವರ ಆಳ್ವಿಕೆಯ ಅವಧಿಯಲ್ಲಿ ಪ್ರಾಚೀನ ಸಂಸ್ಕೃತಿಗಿಂತ ಭಿನ್ನವಾದ ಭಾಷೆ, ಧರ್ಮ, ಕಲೆ, ಶಿಕ್ಷಣ, ಆಡಳಿತ ಇತ್ಯಾದಿ ಜನ ಜೀವನದ ಮೇಲೆ ಪರಿಣಾಮ ಬೀರಿ ವೈವಿಧ್ಯಮಯವಾದ ಸಂಸ್ಕೃತಿ ನಗರ ನಿರ್ಮಾಣಗೊಂಡಿತು. ಬೆಳಗಾವಿ ಪ್ರದೇಶದ ಇತಿಹಾಸವನ್ನು ಮೂರು ಹಂತಗಳಾಗಿ ವಿಂಗಡಿಸಿದಾಗ ಪ್ರಾಚೀನ ಕಾಲದ ರಾಜಕೀಯ, ಸಾಮಾಜಿಕ, ಧರ್ಮ, ಕಲೆ, ಸಾಹಿತ್ಯ, ಶಿಕ್ಷಣ ಹೀಗೆ ಜನಜೀವನಕ್ಕೆ ಕೊಡುಗೆ ನೀಡಿದ ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ರಟ್ಟರು ಕ್ರಮವಾಗಿ ಬೆಳಗಾವಿ ಪ್ರದೇಶದಲ್ಲಿ ಆಳ್ವಿಕೆ ಮಾಡಿ ಭದ್ರವಾದ ಆಡಳಿತವನ್ನು ನಿರ್ಮಿಸಿದರು.

ದೇವಗಿರಿ ಯಾದವರು ರಟ್ಟರನ್ನು ಸು ಸೋಲಿಸಿ ಬೆಳಗಾವಿ ವಶಪಡಿಸಿಕೊಂಡ ನಂತರದಿಂದ ಸವಣೂರ ನವಾಬರ ಅಂತ್ಯದ ವರೆಗಿನ ಕಾಲವನ್ನು ಮಧ್ಯಯುಗದ ಆಡಳಿತ ಕಾಲವೆಂದು ಪರಿಗಣಿಸಿ ಈ ಅವಧಿಯಲ್ಲಿ ಉಂಟಾದ ರಾಜಕೀಯ ಬದಲಾವಣೆಗಳನ್ನು ಇಲ್ಲಿ ವಿವರಿಸಲಾಗಿದೆ.

### ದೇವಗಿರಿ ಯಾದವರು(ಕ್ರಿ.ಶ.೧೧೫೦ರಿಂದ ೧೩೧೦)

ದೇವಗಿರಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದ ಯಾದವರನ್ನು ಸೇವುಣರೆಂದು ಕರೆಯಲಾಗುತ್ತದೆ. ಸೇವುಣಚಂದ್ರ ಎಂಬ ಅರಸನಿಂದ ಪ್ರಾರಂಭಗೊಂಡ ಈ ವಂಶವು ಕ್ರಿ.ಶ. ೧೧೫೦ ರಿಂದ ಕಲ್ಯಾಣಿ ಚಾಲುಕ್ಯರ ಸಾಮಂತರಾಗಿ ಮುಂದುವರೆದು ಸುಮಾರು ಎರಡು ಶತಮಾನಗಳ ಕಾಲ ಆಳ್ವಿಕೆ ಮಾಡಿದರು. ಇವರ ಆಳ್ವಿಕೆ ಕಾಲದ ಸುಮಾರು ೧೨ ಶಿಲಾಶಾಸನಗಳು ಬೆಳಗಾವಿ ಪ್ರದೇಶದಲ್ಲಿ ದೊರೆತಿವೆ. ಬೆಳಗಾವಿಯ ಬಹುಭಾಗ ಪ್ರದೇಶ ಇವರ ಆಡಳಿತಕ್ಕೆ ಒಳಪಟ್ಟಿರಬಹುದೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.[೪೧] ಹೊಯ್ಸಳರು ಕಲ್ಯಾಣ ಚಾಲುಕ್ಯರಿಂದ ವಶಪಡಿಸಿಕೊಂಡಂತಹ ಬೆಳ್ವಲನಾಡನ್ನು ಸ್ವಾಧೀನಪಡಿಸಿಕೊಳ್ಳಲು ಸೇವುಣರ ಪ್ರಸಿದ್ಧ ಅರಸ ಭಿಲ್ಲಮನ ಮೊಮ್ಮಗನಾದ ಸಿಂಘನನು ಕ್ರಿ.ಶ.೧೨೦೦-೧೨೪೭ರವರೆಗೆ ಆಳ್ವಿಕೆ ಮಾಡಿದ. ಈತ ಸಾಮ್ರಾಜ್ಯ ವಿಸ್ತರಣೆಗಾಗಿ ಚಾಣಾಕ್ಷತೆಯಿಂದ ಯೋಜನೆ ರೂಪಿಸಿ ತನ್ನ ದಕ್ಷಿಣದ ದಾಳಿಯನ್ನು ಪಶ್ಚಿಮದ ಭಾಗದಿಂದ ಪ್ರಾರಂಭಿಸಿದನು. ಗೋವೆಯ ಕದಂಬರ ಶ್ರೇಷ್ಠ

ಅರಸನಾದ ಮುಮ್ಮಡಿ ಜಯಕೇಶಿಯು ಗೋವೆ ಮತ್ತು ಅದರ ಸುತ್ತಮುತ್ತಲಿನ ಭಾಗವನ್ನು ಆಳುತ್ತಿದ್ದನು. ಈತನನ್ನು ಕ್ರಿ.ಶ.೧೨೦೬ರಲ್ಲಿ ಸೋಲಿಸಿ ಆತನ ಎಲ್ಲ ಭಾಗಗಳನ್ನು ತನ್ನ ಅಧೀನಕ್ಕೆ ವಶಪಡಿಸಿಕೊಂಡನು.[೪೨]

ಇದೇ ಸಮಯದಲ್ಲಿ ವೇಣುಗ್ರಾಮವನ್ನು ಆಳುತ್ತಿದ್ದ ರಟ್ಟವಂಶದ ಎರಡನೆಯ ಲಕ್ಷ್ಮೀದೇವನನ್ನು ಕ್ರಿ.ಶ. ೧೨೨೮ರಲ್ಲಿ ಸೋಲಿಸಿ ವೇಣುಗ್ರಾಮವನ್ನು ತನ್ನ ವಶಕ್ಕೆ ಪಡೆದುಕೊಂಡನು. ಈ ಯುದ್ಧದಲ್ಲಿ ರಟ್ಟ ವಂಶವನ್ನು ಸಂಪೂರ್ಣವಾಗಿ ನಿರ್ಮೂಲಗೊಳಿಸಿದನು. ಈ ಯುದ್ದದಿಂದ ಕುಹುಂಡಿ-೩೦೦೦ ಭಾಗವು ಸೇವುಣರ ವಶವಾಯಿತು.[೪೩] ಸೇವುಣರ ಕನ್ನರದೇವನು ಕ್ರಿ.ಶ.(೧೨೪೭ ರಿಂದ ೧೨೬೧)ವರೆಗೆ ಆಳ್ವಿಕೆ ಮಾಡಿದನು. ಈತನು ಬೆಳಗಾವಿ ಪ್ರದೇಶವನ್ನು ಪ್ರಮುಖ ಆಡಳಿತದ ಭಾಗವಾಗಿ ಮಾಡಿಕೊಂಡು ಆಳಿದರ ಬಗ್ಗೆ ಸಾಕಷ್ಟು ಕುರುಹುಗಳು ಈ ಭಾಗದಲ್ಲಿ ದೊರೆಯುತ್ತವೆ. ಈತನ ಒಂದು ಶಾಸನ ಬೆಳಗಾವಿ ಕೋಟೆಯಲ್ಲಿರುವ ಸಫಾ ಮಸೀದಿಯ ೨ನೇಯ ಕಂಬದ ಮೇಲಿನ ಶಾಸನವು ಇಕ್ಷುಗ್ರಾಮದ ಅಗ್ರಹಾರದ ಮಾಹಾಜನರಿಗೆ ಅಗ್ರಹಾರದ ಮುಖ್ಯಸ್ಥನಾದ ಬಸವರಸನ ಸಮ್ಮುಖದಲ್ಲಿ ದಾನದತ್ತಿ ನೀಡಿದ ಉಲ್ಲೇಖ ಈ ಶಾಸನದಲ್ಲಿದೆ.[೪೪]

ಸೇವುಣರು ಹೆಚ್ಚು ಕಾಲ ಬೆಳಗಾವಿಯಲ್ಲಿ ಆಡಳಿತ ನಡೆಸಲಿಲ್ಲ. ಇದೇ ಸಮಯದಲ್ಲಿ ದೆಹಲಿ ಸುಲ್ತಾನ ಅಲ್ಲಾವುದ್ಧೀನ ಖಿಲ್ಜಿಯ ಕ್ರಿ.ಶ.(೧೨೯೫–೧೩೨೬)ದಂಡನಾಯಕ ಮಲಿಕಾಫರ್ ಕ್ರಿ.ಶ.೧೩೦೯–೧೦ರಲ್ಲಿ ದಾಳಿ ಮಾಡಿ ದೇವಗಿರಿಯನ್ನು ವಶಪಡಿಸಿಕೊಂಡನು. ಮತ್ತೆ ೨ನೇ ಬಾರಿ ಕ್ರಿ.ಶ.೧೩೧೫ರಲ್ಲಿ ದೇವಗಿರಿಯ ಮೇಲೆ ದಾಳಿ ಮಾಡಿ ಯಾದವರನ್ನು ಸಂಪೂರ್ಣವಾಗಿ ಸೋಲಿಸಿ ಅವರ ಆಡಳಿತ ಭಾಗಗಳನ್ನು ತನ್ನ ಅಧೀನಕ್ಕೆ ಪಡೆದುಕೊಂಡನು. ಅಲ್ಲಾವುದ್ಧೀನ ದಕ್ಷಿಣದ ಪ್ರಾಂತದ ಆಡಳಿತವನ್ನು ನೋಡಿಕೊಳ್ಳಲು ಪ್ರಾಂತಾಧಿಕಾರಿಯನ್ನಾಗಿ ಮಲ್ಲಿಕಾಫರ್‌ನನ್ನು ನೇಮಿಸಿದನು. ಆಗ ಬೆಳಗಾವಿಯು ಕೂಡಾ ಅವನ ಆಡಳಿತದ ಭಾಗಕ್ಕೆ ಒಳಪಟ್ಟಿತ್ತು.[೪೫] ಮಲಿಕಾಫರ್ ದೇವಗಿರಿಯನ್ನು ವಶಪಡಿಸಿಕೊಂಡ ನಂತರ ದ್ವಾರಸಮುದ್ರದ ಮೇಲೆ ದಾಳಿ ಮಾಡುವ ಸಂದರ್ಭದಲ್ಲಿ ವೇಣುಗ್ರಾಮ(ಬೆಳಗಾವಿ) ಕೋಟೆಯ ಮೇಲೆ ದಾಳಿ ಮಾಡಿ ನಾಶಪಡಿಸಿ ದನು. ಮುಂದೆ ಆದಿಲ್‌ಶಾಹಿಗಳ ಆಳ್ವಿಕೆಗೆ ಬೆಳಗಾವಿ ಒಳಪಡುವವರೆಗೂ ಕೋಟೆ ನಿರೂಪಯೋಗವಾಗಿತ್ತು.[೪೬]

ಅಲ್ಲಾವುದ್ಧೀನ ಕ್ರಿ.ಶ.೧೩೧೬ರಲ್ಲಿ ಮರಣ ಹೊಂದಿದ ಕಾರಣ ಮಲಿಕಾಫರ್ ದೆಹಲಿಗೆ ಮರಳಿದ. ನಂತರ ದೇವಗಿರಿಯನ್ನು ಕಲ್ಯಾಣಿ ಚಾಳುಕ್ಯರ ವಂಶಜರು ವಶಪಡಿಸಿಕೊಂಡು ಸ್ವತಂತ್ರವಾಗಿ ಆಳತೊಡಗಿದರು. ನಂತರ ಅಲ್ಲಾವುದ್ಧೀನನ ಮಗ ಕುತುಬುದ್ಧೀನ ಮುಬಾರಕನ ಆಳ್ವಿಕೆ ಸಂದರ್ಭದಲ್ಲಿ ಮಲಿಕ ಯಕ್ಲಿಬಿಯನ್ನು ದಕ್ಷಿಣದ ಗವರ್ನರನಾಗಿ ನೇಮಿಸಿದನು. ಈತ

ಸುಲ್ತಾನನ ವಿರುದ್ಧ ಬಂಡೆದ್ದು ದೇವಗಿರಿಯಲ್ಲಿ ಸ್ವತಂತ್ರವಾಗಿ ಆಳತೊಡಗಿದನು. ಆಗ ಬೆಳಗಾವಿ ಪ್ರದೇಶವು ಇವನ ಆಡಳಿತಕ್ಕೆ ಒಳಪಟ್ಟಿತು. ನಂತರ ಕ್ರಿ.ಶ.೧೩೨೧ರಲ್ಲಿ ಖಿಲ್ಜಿ ಮನೆತನ ಕೊನೆಗೊಂಡು ತುಘಲಕನ ವಂಶದ ಆಳ್ವಿಕೆಗೆ ಒಳಪಟ್ಟಿತು.[೪೭] ದೆಹಲಿಯಲ್ಲಿ ಅಲ್ಲಾವುದ್ಧೀನ ಖಿಲ್ಜಿ ನಂತರ ಸಿಂಹಾಸನ ಅಲಂಕರಿಸಿದ ತುಘಲಕ್ ವಂಶದ ಮಹಮ್ಮದನು ದಕ್ಷಿಣದ ಕಡೆಗೆ ಸು ಕ್ರಿ.ಶ.೧೩೨೭ರಲ್ಲಿ ದಾಳಿ ಮಾಡಿ ದಕ್ಷಿಣದ ಬೆಳಗಾವಿ, ಹುಕ್ಕೇರಿ, ರಾಯಭಾಗ ಪ್ರದೇಶಗಳನ್ನು ತನ್ನ ಅಧೀನಕ್ಕೆ ಒಳಪಡಿಸಿಕೊಂಡನು. ಹಾಗೂ ಕ್ರಿ.ಶ.೧೩೨೭ರಲ್ಲಿ ಹೊಸದಾಗಿ ಸೇರ್ಪಡೆಗೊಂಡ ದಕ್ಷಿಣದ ಭಾಗದ ಆಡಳಿತಗೊಸ್ಕರ ತನ್ನ ರಾಜಧಾನಿಯನ್ನು ದೆಹಲಿಯಿಂದ ದೌಲತಾಬಾದಗೆ ವರ್ಗಾಯಿಸಿದನು. ಆಗ ಬೆಳಗಾವಿ ಸುತ್ತಮುತ್ತಲಿನ ಭಾಗದ ಹುಕ್ಕೇರಿ, ಮತ್ತು ರಾಯಭಾಗ ಪ್ರದೇಶಗಳಿಗೆ ತನ್ನ ಅಮೀರರನ್ನು ನೇಮಿಸಿದನು. ಪ್ರಾಯಶಃ ಹುಕ್ಕೇರಿಯಲ್ಲಿ ಗಜಬರಖಾನನು ಮುಖ್ಯ ಅಧಿಕಾರಿಯಾಗಿದ್ದನು ಎನ್ನಲಾಗಿದೆ.[೪೮]

ತುಘಲಕ್ ಮಹಮ್ಮದನ ಆಳ್ವಿಕೆಯ ಸಂದರ್ಭದಲ್ಲಿ ದಕ್ಷಿಣದ ಭಾಗದ ಕಂಪಲಿ ರಾಜ್ಯವು ಸ್ವತಂತ್ರವಾಗಿ ಉಳಿದಿತ್ತು, ಇದೇ ಸಂದರ್ಭದಲ್ಲಿ ಕಂಪಲಿಯಲ್ಲಿ ಬಂಡಾಯವೆದ್ದಿತು, ಈ ಬಂಡಾಯವನ್ನು ಸದೆಬಡಿಯಲು ಮಹಮ್ಮದನು ಹರಿಹರ-ಬುಕ್ಕರನ್ನು ನೇಮಿಸಿದನು. ಈ ಬಂಡಾಯವನ್ನು ಯಶಸ್ವಿಯಾಗಿ ಸದೆಬಡಿದ ಸಹೋದರರಿಗೆ ಈ ಭಾಗದ ಆಡಳಿತವನ್ನು ನೋಡಿಕೊಳ್ಳಲು ನೇಮಿಸಿದನು. ಮುಂದೆ ತುಘಲಕನ ಆಡಳಿತದಲ್ಲಿ ಅರಾಜಕತೆ ಉಂಟಾಗಿ ಕಂಪಲಿಯಲ್ಲಿ ಕ್ರಿ.ಶ.೧೩೩೬ರಲ್ಲಿ ಹರಿಹರ ಬುಕ್ಕರು ರಾಜ್ಯವನ್ನು ಸ್ಥಾಪಿಸಲು ಮುಂದಾದರು.[೪೯]

## ವಿಜಯನಗರ ಸಾಮ್ರಾಜ್ಯ

ಸನಾತನ ಧರ್ಮದ ಉದಾತ್ತಭಾವಗಳನ್ನು ಮೈಗೊಡಿಸಿಕೊಂಡು ಹಾಗೂ ಸರ್ವಧರ್ಮಗಳ ಸಹಿಷ್ಣುತಾ ನೀತಿಯನ್ನು ಅನುಸರಿಸಿದ ವಿಜಯನಗರ ಸಾಮ್ರಾಜ್ಯದ ಸ್ಥಾಪಕರಾದ ಹರಿಹರ ಬುಕ್ಕರು ಕ್ರಿ.ಶ. ೧೩೩೬ ರಲ್ಲಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿ ಕಂಪಲಿಯಿಂದ ಆಳ್ವಿಕೆ ಪ್ರಾರಂಭಿಸಿದರು. ಪ್ರಾರಂಭದಲ್ಲಿ ದಕ್ಷಿಣ ಭಾರತದ ಮಲಪ್ರಭಾ ನದಿಯಿಂದ ಉತ್ತರದ ಕೃಷ್ಣೆವರೆಗೂ ಇವರ ಸಾಮ್ರಾಜ್ಯದ ಮೇರೆಗಳಾಗಿದ್ದವು ಎಂದು ಒಂದನೇ ಹರಿಹರನ ಕ್ರಿ.ಶ.೧೩೪೦ರ ಶಿಲಾಶಾಸನ ತಿಳಿಸುತ್ತದೆ.[೫೦]

ಬೆಳಗಾವಿ ಸುತ್ತಮುತ್ತಲಿನ ಭಾಗದ ಪ್ರದೇಶಗಳು ಕ್ರಿ.ಶ.೧೩೪೭ರವರೆಗೆ ವಿಜಯನಗರ ಸಾಮ್ರಾಜ್ಯದ ಅಧೀನದಲ್ಲಿದ್ದವು. ಅಂದರೆ ಆರಂಭ ಕಾಲದಿಂದಲೂ ಬೆಳಗಾವಿ ಪ್ರದೇಶ ಇವರ ಅಧೀನಕ್ಕೆ ಒಳಪಟ್ಟಿತ್ತೆಂದು ದೃಢವಾಗುತ್ತದೆ. ಕ್ರಿ.ಶ.೧೩೪೭ರಲ್ಲಿ ಬಹುಮನಿ ರಾಜ್ಯ ಸ್ಥಾಪನೆಯಾದ

ನಂತರ ಬೆಳಗಾವಿ ಉತ್ತರದ ಪ್ರದೇಶಗಳಾದ ಘಟಪ್ರಭಾ ನದಿಯಿಂದ ಉತ್ತರಕ್ಕೆ ಇರುವ ಎಲ್ಲ ಪ್ರದೇಶಗಳು ಅವರ ಅಧೀನಕ್ಕೆ ಒಳಪಟ್ಟಿರುವ ವಿಷಯವನ್ನು ಫೆರಿಸ್ತಾ ಉಲ್ಲೇಖಿಸುತ್ತಾನೆ.[೫೧] ಸಂಗಮ ವಂಶದ ಕೊನೆಯ ಅರಸ ವಿರೂಪಾಕ್ಷ (ಕ್ರಿ.ಶ.೧೪೬೫–೮೫)ರ ಕಾಲದಲ್ಲಿ ಬೆಳಗಾವಿ ಗೋವೆ ಮತ್ತು ಕೊಂಕಣದ ಪ್ರದೇಶಗಳನ್ನು ಬಹುಮನಿ ಅರಸರು ಗೆದ್ದುಕೊಂಡರು. ನಂತರ ವಿಜಯನಗರದ ಅರಸ ಒಂದನೇಯ ನರಸಿಂಗರಾಯನು (ಕ್ರಿ.ಶ.೧೪೮೫–೧೪೯೧) ಆಳ್ವಿಕೆಯ ಕ್ರಿ.ಶ.೧೪೮೧ರಲ್ಲಿ ಬೆಳಗಾವಿಯನ್ನು ಮತ್ತೆ ವಶಪಡಿಸಿಕೊಂಡನು.[೫೨]

ಕೃಷ್ಣದೇವರಾಯನ ಆಳ್ವಿಕೆಗೆ ಒಳಪಟ್ಟಿತ್ತೆಂದು ದೃಢೀಕರಿಸಲು ಕ್ರಿ.ಶ.೧೫೧೦ರಲ್ಲಿ ಅಲ್ಬುಕರ್ಕನು ಗೋವೆಯನ್ನು ಸ್ವಾಧೀನಪಡಿಸಿಕೊಂಡ ನಂತರ ಅಲ್ಲಿದ್ದ ಆದಿಲ್‌ಖಾನನ ಆಡಳಿತಗಾರರನ್ನು ಓಡಿಸಿದರು. ಇದೆ ಸಂದರ್ಭದಲ್ಲಿ ಹಿಂದುಗಳೇ ಬಹುಸಂಖ್ಯಾತರಾದ ಬೆಳಗಾವಿ ಪಟ್ಟಣದ ಪ್ರಜೆಗಳು ಆದಿಲ್‌ಖಾನನ ಅಧಿಕಾರಿಗಳನ್ನು ಬೆಳಗಾವಿಯಿಂದ ಓಡಿಸಿದರು. ಬೆಳಗಾವಿ ನಗರದ ಜನಸ್ತೋಮ ನಾವು ವಿಜಯನಗರದ ಆಡಳಿತಕ್ಕೆ ಒಳಪಡಲು ಇಚ್ಛಾಪತ್ರವನ್ನು ನೀಡಿದರು. ಎಂಬ ಉಲ್ಲೇಖವನ್ನು ಕೆ.ಜಿ.ಬಾಲಕೃಷ್ಣರಾವ ವಿವರಿಸಿದ್ದಾರೆ.[೫೩] ಇನ್ನೊಂದು ಶಾಸನ ಕ್ರಿ.ಶ. ೧೫೧೧ರ ಸವದತ್ತಿ ಯಲ್ಲಮ್ಮನ ಗುಡಿಯ ಶಾಸನ ಕೃಷ್ಣದೇವರಾಯನ ಆಳ್ವಿಕೆಗೆ ಬೆಳಗಾವಿ ಸುತ್ತಮುತ್ತಲಿನ ಭಾಗ ಒಳಪಟ್ಟಿತ್ತೆಂದು ದೃಢೀಕರಿಸಿವೆ.[೫೪]

**ಬಹುಮನಿ ಸಾಮ್ರಾಜ್ಯ**

ದೆಹಲಿ ಸುಲ್ತಾನ ಮಹಮ್ಮದ ತುಘಲಕನ ಆಡಳಿತದ ವಿರುದ್ಧ ಬಂಡಾಯವೆದ್ದ ಅಮೀರರಲ್ಲಿ ಅತಿ ಪ್ರಮುಖನಾದ ಹಸನ್‌ನು ಕ್ರಿ.ಶ.೧೩೪೭ ಅಗಸ್ಟ್ ೩ರಂದು ದಖ್ಖನ್ನಿನ ದೌಲತಾಬಾದನಲ್ಲಿ ಸ್ವತಂತ್ರ ರಾಜ್ಯ ಸ್ಥಾಪಿಸಿದನು. ಕ್ರಿ.ಶ.೧೩೪೭–೫೮ ಹಸನ್‌ರ ಆಳ್ವಿಕೆಯ ಕಾಲದಲ್ಲಿ ಬೆಳಗಾವಿಯ ಉತ್ತರ ಭಾಗವಾದ ಘಟಪ್ರಭಾ ನದಿವರೆಗೆ ರಾಜ್ಯ ವಿಸ್ತರಿಸಿದನು. ಹಸನ್‌ನು ದಕ್ಷಿಣದ ಭಾಗದ ಆಡಳಿತಗಾರನನ್ನಾಗಿ ಮಲಿಕ ಸೈಪುದ್ಧೀನ ಘೋರಿ ಎಂಬುವನನ್ನು ನೇಮಿಸಿದನು. ನಂತರ ಆಳಿದ ಮಹಮ್ಮದನು ಕ್ರಿಶ೧೩೫೮–೭೫ ಗೋವೆಯನ್ನು ವಿಜಯನಗರ ಅರಸರಿಂದ ಗೆದ್ದುಕೊಂಡನು.[೫೫] ಆದರೆ ಬೆಳಗಾವಿಯು ವಿಜಯನಗರ ಅರಸರ ಅಧೀನದಲ್ಲಿಯೇ ಉಳಿಯಿತು. ಎಂದು ಫೆರಿಸ್ತಾನ ಉಲ್ಲೇಖದಿಂದ ತಿಳಿದುಬರುವುದು.

ಕ್ರಿ.ಶ.೧೪೬೬ರಲ್ಲಿ ಸುಲ್ತಾನ ಮೂರನೇ ಮಹಮ್ಮದನ ಕ್ರಿ.ಶ.೧೪೬೩–೧೪೮೨ ಪ್ರಸಿದ್ಧ ಪ್ರಧಾನ ಮಂತ್ರಿಯಾದ ಮಹಮ್ಮದ ಗವಾನನು ನೇಮಕಗೊಂಡ ನಂತರ ಕ್ರಿ.ಶ.೧೪೭೨ರಲ್ಲಿ ಕೊಂಕಣ, ಬೆಳಗಾವಿ ಪ್ರದೇಶ ಮತ್ತು ಗೋವಾ ಭಾಗಗಳ ಮೇಲೆ ದಾಳಿ ಮಾಡಿದನು.

ಸುಲ್ತಾನನಾದ ಮೂರನೇಯ ಮಹಮ್ಮದನು ಗೋವಾದ ದಾಳಿ ಸಂದರ್ಭದಲ್ಲಿ ಬೆಳಗಾವಿಗೆ ಭೇಟಿ ಇತ್ತನು. ಸುಲ್ತಾನನ ನೇತೃತ್ವದಲ್ಲಿ ಮದ್ದಿನ ಪುಡಿ ಉಪಯೋಗಿಸಿ ಮಹಮ್ಮದ ಗವಾನ ಹಾಗು ಯೂಸೂಪ ಆದಿಲ್‌ಖಾನರು ದಾಳಿ ನಡೆಸಿ ಬೆಳಗಾವಿಯನ್ನು ವಶಪಡಿಸಿಕೊಂಡರು.[೫೬]

ಕ್ರಿ.ಶ.೧೪೭೨ರಲ್ಲಿ ಬೆಳಗಾವಿ ಪ್ರದೇಶವನ್ನು ವಿಜಯನಗರದ ಗವರ್ನರನಾದ ಪರ್ಕಿಟಾ ಎಂಬುವನು ರಕ್ಷಿಸಿಕೊಳ್ಳಲು ಪ್ರಯತ್ನಿಸಿದನು. ಆದರೆ ಕ್ರಿ.ಶ.೧೪೭೩ರಲ್ಲಿ ಬೆಳಗಾವಿ ಬಹುಮನಿಗಳ ವಶವಾಯಿತು. ಫೆರಿಸ್ತಾನ ಪ್ರಕಾರ ಮಹಮ್ಮದ ಗವಾನನು ಸುಲ್ತಾನನಿಂದ ವಿಜಯದ ಪ್ರತೀಕವಾಗಿ ಕೊಲ್ಲಾಪುರ, ಗೋವಾ, ಮತ್ತು ಲೊಂಡಾ ಭಾಗಗಳನ್ನು ಜಹಗೀರವಾಗಿ ಪಡೆದನು. ಮಹಮ್ಮದ ಗವಾನನು ಸುಲ್ತಾನನಿಂದ ಕ್ರಿ.ಶ.೧೪೭೨ರಲ್ಲಿ ಪಡೆದ ಜಹಗೀರ ಪ್ರದೇಶಗಳಾದ ಲೊಂಡಾ, ಕೊಲ್ಲಾಪುರ, ಬೆಳಗಾವಿ, ಪ್ರದೇಶಗಳ ಆಡಳಿತವನ್ನು ಕ್ರಿ.ಶ. ೧೪೭೭ರಲ್ಲಿ ಫಕೀರ್ ಉಲ್ ಗಿಲಾನಿ ಎಂಬ ಅಧಿಕಾರಿಗೆ ಒಳಪಡಿಸಿದನು.[೫೭] ಹಾಗೂ ಗವಾನನು ಮುಸ್ತಪಾ ಎಂಬ ಅಧಿಕಾರಿಯನ್ನು ನೇಮಿಸಿದನು ಎಂದು ಹಲವಾರು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೫೮] ಗಿಲಾನಿಯೇ(ಮುಸ್ತಾಪಾ)ಆಗಿರಬಹುದು ಎಂದು ಊಹಿಸಲಾಗಿದೆ.

ಪದೇ ಪದೇ ಈ ಭಾಗದಲ್ಲಿ ವಿಜಯನಗರದ ಅರಸರ ಮಧ್ಯೆ ಇಲ್ಲಿ ಹಲವು ಕದನಗಳು ಏರ್ಪಡುವ ಕಾರಣ ಈ ಭಾಗದಲ್ಲಿ ಈ ಅಧಿಕಾರಿಯನ್ನು ನೇಮಿಸಿರಬೇಕು. ಮುಂದೆ ಈತನ ಹೆಸರಿನಿಂದಲೇ "ಮುಸ್ತಫಾಬಾದ" ಎಂದು ಬೆಳಗಾವಿಯನ್ನು ಕರೆಯಲಾಯಿತು. ಮಹಮ್ಮದ ಗವಾನನು ಬೆಳಗಾವಿಯನ್ನು ಆಳುತ್ತಿದ್ದ ರಾಯನನ್ನು(ಪರ್ಕಿಟನಿರಬಹುದು) ಈತ ಪ್ರಸಿದ್ಧ ದಂಗೆಕೋರನಾಗಿದ್ದು ಆದರೆ ಗವಾನನು ಈತನನ್ನು ತನ್ನ ರಾಜ್ಯದ ಒಬ್ಬ ಅಮೀರನನ್ನಾಗಿ ನೇಮಿಸಿ ಬೆಳಗಾವಿಯನ್ನು ವಶಪಡಿಸಿಕೊಂಡನೆಂದು ಷೇಕ ಅಲಿಯವರು ಅಭಿಪ್ರಾಯ ಪಟ್ಟಿದ್ದಾರೆ.[೫೯] ಮಹಮ್ಮದ ಗವಾನ ಕ್ರಿ.ಶ.೧೪೮೨ರಲ್ಲಿ ಮರಣ ಹೊಂದಿದ ನಂತರ ಬಹುಮನಿ ರಾಜ್ಯ ಅಶಕ್ತವಾಗತೊಡಗಿತು. ಇದೇ ಸಂದರ್ಭದಲ್ಲಿ ವಿಜಯನಗರದ ಅರಸ ಸಾಳ್ವ ಒಂದನೇ ನರಸಿಂಹ ಕ್ರಿ.ಶ.(೧೪೮೫-೯೫) ೧೪೮೧ರಲ್ಲಿ ಬೆಳಗಾವಿಯನ್ನು ವಶಪಡಿಸಿಕೊಂಡನು.[೬೦]

ಬಹುಮನಿ ಸುಲ್ತಾನ ಒಂದನೇಯ ಮಹಮ್ಮದ ೧೪೮೩ರಲ್ಲಿ ಮರಣ ಹೊಂದಿದ ನಂತರ ಉತ್ತರಾಧಿಕಾರಿಯಾಗಿ ಶಹಾಬುದ್ಧೀನ ಮಹಮ್ಮದ(ಕ್ರಿ.ಶ. ೧೪೮೨ ರಿಂದ ೧೫೧೮) ಆಳ್ವಿಕೆಯ ಸಂದರ್ಭದಲ್ಲಿ ಆಸ್ಥಾನದಲ್ಲಿ ಅರಾಜಕತೆ ಉಂಟಾಗಿ ಬಹುಮನಿ ರಾಜ್ಯ ಕ್ರಿ.ಶ. ೧೪೮೯ರಲ್ಲಿ ವಿಭಜನೆ ಹೊಂದಿ ದಕ್ಷಿಣದ ಪ್ರಾಂತಾಧಿಕಾರಿಯಾದ ಯುಸೂಫ್ ಆದಿಲ್‌ಖಾನನಿಗೆ ಬೆಳಗಾವಿ, ಮೀರಜ ಭಾಗಗಳು ಇವನ ಅಧೀನಕ್ಕೆ ಒಳಪಟ್ಟಿದ್ದವು. ಇದೇ ಸಂದರ್ಭದಲ್ಲಿ ಗೋವಾ ಮತ್ತು ಬೆಳಗಾವಿ ಪ್ರದೇಶಗಳ ಮೇಲಿನ ಪ್ರಭುತ್ವಕ್ಕಾಗಿ ನಿರಂತರ ಹೋರಾಟ ನಡೆದು ಈ ಪ್ರದೇಶದಲ್ಲಿ ರಾಜಕೀಯ ಅಸ್ಥಿರತೆಗೆ ಕಾರಣವಾಯಿತು.

ಇದೇ ಸಮಯದಲ್ಲಿ ಕ್ರಿ.ಶ. ೧೪೮೯ರಲ್ಲಿ ಗೋವಾದ ಬಹುಮನಿ ಕೊತ್ವಲನಾಗಿದ್ದ ಬಹುದ್ದೂರ ಗಿಲಾನಿಯು ದಂಗೆಯೆದ್ದು ಗೋವಾ ಮತ್ತು ಬೆಳಗಾವಿಯನ್ನು ವಶಪಡಿಸಿಕೊಂಡನು. ಕ್ರಿ.ಶ. ೧೪೯೩ರಲ್ಲಿ ತನ್ನ ದಾಳಿಯನ್ನು ಮುಂದುವರೆಸಿ ಸಂಕೇಶ್ವರವನ್ನು ವಶಪಡಿಸಿಕೊಂಡನು. ನಂತರ ಸಂಕೇಶ್ವರವನ್ನು ತನ್ನ ದಾಳಿಯ ಪ್ರಮುಖ ಕೇಂದ್ರವಾಗಿಸಿಕೊಂಡು ಮೀರಜ್ ಮತ್ತು ಜಮಖಂಡಿಯ ಭಾಗವನ್ನು ವಶಪಡಿಸಿಕೊಂಡನು.

ಯೂಸೂಪನು ಕ್ರಿ.ಶ.೧೪೯೪ರಲ್ಲಿ ಬಹೂದ್ದೂರ ಗಿಲಾನಿಯನ್ನು ಕೊಲೆ ಮಾಡಿ ಈತನ ಪ್ರದೇಶಗಳನ್ನು ಮತ್ತು ಜಹಗೀರಗಳನ್ನು ಕೊಂಕಣದ ಗವರ್ನರನಾದ ಐನ್-ಉಲ್ಕ-ಮುಲ್ಕ್ ಗಿಲಾನಿಗೆ ಕೊಡಲಾಯಿತು. ಈತ ಆದಿಲ್‌ಶಾಹಿಗಳ ಸ್ವಾಮಿತ್ವವನ್ನು ಒಪ್ಪಿಕೊಂಡನು. ಬೆಳಗಾವಿ ಕೆಲವು ದಿನಗಳ ಕಾಲ ಈತನ ಅಧೀನಕ್ಕೆ ಒಳಪಟ್ಟಿತು.

**ವಿಜಾಪುರದ ಆದಿಲ್‌ಶಾಹಿಗಳು**

ಬಹುಮನಿ ಸಾಮ್ರಾಜ್ಯ ಐದು ವಂಶಗಳಾಗಿ ವಿಭಜನೆ ಹೊಂದಿತು. ಆಗ ವಿಜಾಪುರದ ಪ್ರಾಂತಾಧಿಕಾರಿಯಾದ ಯುಸೂಪನು "ಆದಿಲ್‌ಶಾಹಿ" ಎಂಬ ವಂಶವನ್ನು ವಿಜಾಪುರದಲ್ಲಿ ಸ್ಥಾಪಿಸಿದನು. ಈತ ಬಹುಮನಿ ಸುಲ್ತಾನ ಮೂರನೆಯ ಮಹಮ್ಮದನ ಆಡಳಿತದಲ್ಲಿ ಸೇವೆಗೆ ಸೇರಿಕೊಂಡು ಆದಿಲ್‌ಖಾನ್ ಎಂಬ ಬಿರುದು ಪಡೆದು ವಿಜಾಪುರದ ಪ್ರಾಂತಾಧಿಕಾರಿಯಾದನು. ಗವಾನನ ಮರಣದ ನಂತರ ಬಹುಮನಿ ಆಡಳಿತದಲ್ಲಿ ಅರಾಜಕತೆ ಪ್ರಾರಂಭವಾಗಿ ಇದರ ಲಾಭ ಪಡೆದು ಕ್ರಿ.ಶ.೧೪೮೯ರಲ್ಲಿ ವಿಜಾಪುರದಲ್ಲಿ ಸ್ವತಂತ್ರ ಸುಲ್ತಾನ ಎಂದು ಘೋಷಿಸಿಕೊಂಡು ಆಡಳಿತ ನಡೆಸಿದನು. ಬಹುಮನಿಗಳ ವಶದಲ್ಲಿದ್ದ ದಕ್ಷಿಣದ ಪ್ರಾಂತದ ಪ್ರದೇಶಗಳು ಯೂಸೂಪನ ಅಧೀನಕ್ಕೆ ಒಳಪಟ್ಟವು. ಹಾಗೂ ಬೆಳಗಾವಿ, ಗೋವಾ, ಕೊಂಕಣ ತೀರ ಪ್ರದೇಶಗಳು ಈತನ ಆಡಳಿತ ಕೇಂದ್ರಗಳಾಗಿ ಮುಂದುವರೆದವು. ಆದರೆ ಕ್ರಿ.ಶ.೧೫೧೦ರಲ್ಲಿ ಪೋರ್ಚುಗೀಸ ಗವರ್ನರ ಅಲ್ಬುಕರ್ಕನು ಗೋವೆಯನ್ನು ಗೆದ್ದುಕೊಂಡನು. ಮೇ ೧೫೧೦ರಲ್ಲಿ ಯೂಸೂಪ ಗೋವೆಯನ್ನು ಒಂದಕ್ಕೆ ಪಡೆದರು ನವೆಂಬರ ೧೫೧೦ ರಲ್ಲಿ ಗೋವಾ ಮತ್ತೆ ಪೋರ್ಚುಗೀಸರ ವಶವಾಯಿತು.[೬೧]

ಯೂಸೂಪ್ ಆದಿಲ್‌ಶಾಹ ಮರಣ ಹೊಂದಿದ ನಂತರ ಆಸ್ಥಾನದಲ್ಲಿ ಸಿಂಹಾಸನಾರೋಹಣಕ್ಕಾಗಿ ಗಲಭೆ ಪ್ರಾರಂಭವಾಯಿತು. ಯಸೂಪ್ ಆದಿಲ್‌ಶಾಹನ ಮಗನಾದ ಇಸ್ಮಾಯಿಲ್ ಕ್ರಿ.ಶ. (೧೫೧೦ ರಿಂದ ೧೫೩೪)ರ ವರೆಗೆ ಆಳ್ವಿಕೆ ಮಾಡಿದನು. ಈತನು ಸಿಂಹಾಸನಾರೂಢನಾಗಲು ಪರದೇಶಿ(ಅಫಾಕಿ)ಸರದಾರರ ನಾಯಕನಾದ ಮಹಮ್ಮದ ಲ್ಹಾರಿ ಎಂಬುವನು ಸಹಾಯಕನಾದನು.

ಸುಲ್ತಾನ ಇಸ್ಮಾಯಿಲ್‌ನು ಮಹಮ್ಮದ ಲ್ಹಾರಿಯ ಶೌರ್ಯ ಸಾಹಸಗಳನ್ನು ಮೆಚ್ಚಿ ಅಸದ್‌ಖಾನ (ಹುಲಿಯಂತ-ವ್ಯಕ್ತಿ) ಎಂಬ ಬಿರುದು ನೀಡಿ ಗೌರವಿಸಿದನು. ಅಸದ್‌ಖಾನನಿಗೆ ಬೆಳಗಾವಿ

ಭಾಗವನ್ನು ಜಹಗೀರವಾಗಿ ನೀಡಲಾಯಿತು. ಈತನು ಕ್ರಿ.ಶ.೧೫೧೧ರಿಂದ ೧೫೪೯ ರವರೆಗೆ ಸುಮಾರು ೩೮ ವರ್ಷಗಳ ಕಾಲ ಬೆಳಗಾವಿಯನ್ನು ಕೇಂದ್ರವನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದನು. ಶೂರ, ಚಾಣಾಕ್ಷ ಆಡಳಿತಗಾರನಾದ ಈತ ಆದಿಲ್‌ಶಾಹಿ ಮನೆತನಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದ್ದಾನೆ.

ತನ್ನ ಜಹಗೀರ ಪ್ರದೇಶವಾದ ಬೆಳಗಾವಿಯನ್ನು ಒಂದು ಪ್ರಮುಖ ಉಪರಾಜಧಾನಿ ರೂಪದಲ್ಲಿ ಅಭಿವೃದ್ಧಿಪಡಿಸಿ ತನ್ನ ಆಸ್ಥಾನದಲ್ಲಿ ಕವಿಗಳಿಗೆ, ವಿದ್ವಾಂಸರಿಗೆ, ಸಂತರಿಗೆ ಆಶ್ರಯ ನೀಡಿದ್ದಲ್ಲದೆ ಎಲ್ಲ ವರ್ಗದ ಜನರನ್ನು ಸಮಾನತೆಯಿಂದ ಕಾಣುತ್ತಿದ್ದನು. ಸರ್ವಧರ್ಮಗಳ ಸಮನ್ವಯ ಸ್ಥಾಪಿಸಿದ ಈತನು ಉನ್ನತವಾದ ವ್ಯಕ್ತಿತ್ವವನ್ನು ಹೊಂದಿದ್ದನು. ಹೀಗಾಗಿ ಇಂದಿಗೂ ದೈವತ್ವದ ರೂಪದಲ್ಲಿ ಈತನನ್ನು ಆರಾಧನೆ ಮಾಡುತ್ತಿದ್ದಾರೆ. ಈತನ ದರ್ಗಾವು ಮಿಲ್ಟ್ರಿ ಕ್ಯಾಂಪ ಭಾಗದಲ್ಲಿ ವಿಶಾಲವಾದ ಪ್ರದೇಶದಲ್ಲಿದೆ.[೬೨]

**ಅಸದಖಾನ**

ಅಸದಖಾನ ಮೂಲ ಹೆಸರು ಖೂಸ್ರೊ. ಈತ ಇರಾನ ಮೂಲದ ಖುಸ್ರೊ ಜಿಲ್ಲೆಯ ಲ್ಹಾರ ಎಂಬ ಹಳ್ಳಿಯಲ್ಲಿ ಕ್ರಿ.ಶ. ೧೪೪೫ರಲ್ಲಿ ಜನಸಿದನು. ಕ್ರಿ.ಶ.೧೪೮೯ರಲ್ಲಿ ಯೂಸೂಫ್ ಆದಿಲ್‌ಶಾಹನ ಸೈನ್ಯದ ಮುಖ್ಯ ದಂಡನಾಯಕನಾಗಿ ನೇಮಕಗೊಂಡು ವಿಜಾಪುರದ ಆದಿಲ್‌ಶಾಹಿ ರಾಜ್ಯದ ಸ್ಥಾಪನೆಗೆ ಪ್ರಮುಖ ಪಾತ್ರವಹಿಸಿದನು. ಇಸ್ಮಾಯಿಲ ಆದಿಲ್‌ಶಾಹ ೧೫೧೦ರ ಆಡಳಿತದಲ್ಲಿ ಪ್ರಮುಖ ಪಾತ್ರವಹಿಸಿ ಬೆಳಗಾವಿಯ ಜಹಗೀರನ್ನು ಕ್ರಿ.ಶ.೧೫೧೧ರಲ್ಲಿ ಪಡೆದು ಸುಮಾರು ೩೮ ವರ್ಷಗಳ ಕಾಲ ಆಳ್ವಿಕೆ ಮಾಡಿ ೧೫೪೯ರಲ್ಲಿ ಮರಣ ಹೊಂದಿದ.[೬೩]

ಬೆಳಗಾವಿಯ ಸರದಾರನಾಗಿ ಆಳ್ವಿಕೆ ಮಾಡುವ ಸಂದರ್ಭದಲ್ಲಿ ವಿಜಾಪುರ ಸೈನ್ಯದ ದಂಡನಾಯಕನಾಗಿ ಕ್ರಿ.ಶ.೧೫೧೫ರಲ್ಲಿ ಅಮೀರ ಬರೀದನ ನೇತೃತ್ವದಲ್ಲಿ ಬಂದಂತಹ ಸೈನ್ಯವನ್ನು ಹಿಮ್ಮೆಟ್ಟಿಸಿದನು. ೧೫೩೪ ರವರೆಗೆ ಇಸ್ಮಾಯಿಲ್ ಆದಿಲ್‌ಖಾನನ ಸೈನ್ಯದ ಮುಖ್ಯ ಸರದಾರನಾಗಿ ಹಲವು ಯುದ್ಧಗಳಲ್ಲಿ ಭಾಗವಹಿಸಿದ್ದನು. ಕ್ರಿ.ಶ.೧೫೩೫ರಿಂದ ಆಳಿದ ಒಂದನೇ ಇಬ್ರಾಹಿಂ ಆದಿಲ್‌ಶಾಹಿ ಆಳ್ವಿಕೆಯ ಕಾಲಘಟ್ಟದಲ್ಲಿ ಮತ್ತೆ ಸರದಾರನಾಗಿ ಮುಂದುವರೆದು ೧೫೪೨ರಲ್ಲಿ ತನ್ನ ಪದವಿಗೆ ರಾಜೀನಾಮೆ ನೀಡಿ ತನ್ನ ಜಹಗೀರಿಗೆ ಹಿಂದುರುಗಿದನು.[೬೪] ಅಸದ್‌ಖಾನನು ರಟ್ಟರ ಕಾಲದಲ್ಲಿ ನಿರ್ಮಾಣವಾದ ಮಣ್ಣಿನ ಕೋಟೆಯನ್ನು ಪುನರ್ ನವೀಕರಿಸಿ ಕಲ್ಲಿನಿಂದ ನಿರ್ಮಿಸಿದಂತೆ ಕಾಣುತ್ತದೆ. ಏಕೆಂದರೆ ಅಸದ್‌ಖಾನ ಆಡಳಿತದಲ್ಲಿ ಯಾಕುಬ್‌ಖಾನ ಎಂಬ ಅಮೀರನು(ಕೊತ್ವಾಲ) ಬೆಳಗಾವಿ ಕೋಟೆಯ ಉತ್ತರದಿಕ್ಕಿನ ಮುಖ್ಯ ಗೋಡೆಯನ್ನು ಪುನರ್ ನಿರ್ಮಾಣ ಕಾರ್ಯ ಪೂರ್ಣಗೊಳಿಸಿದ ಬಗ್ಗೆ ಕೋಟೆ ಗೋಡೆಯ ಮೇಲೆ ಕೊರೆಯಲಾದ

೬ ಸಾಲಿನ ಪರ್ಶಿಯನ್ ಭಾಷೆಯ ಶಾಸನ(ಹಿಜರಿ ಶಕೆ ಪ್ರಕಾರ ೯೩೭ ಕ್ರಿ.ಶ. ೧೫೩೦)ದಲ್ಲಿ ಉಲ್ಲೇಖಿಸುತ್ತದೆ. ಅಂದರೆ ಈ ಅವಧಿಯಲ್ಲಿ ಕೋಟೆ ಸಂಪೂರ್ಣವಾಗಿ ನಿರ್ಮಿಸಿದರ ಬಗ್ಗೆ ದೃಢಪಡಿಸುತ್ತದೆ.[೬೫]

ಇಸ್ಮಾಯಿಲ್ ಆದಿಲ್‌ಖಾನನ ಆಳ್ವಿಕೆ ಕಾಲದಲ್ಲಿ ಅಸದ್‌ಖಾನನು ಖ್ವಾದರಿ ನಿಜಾಮ ಉದ್ವಾನಿ ಪ್ರೋತ್ಸಹದಿಂದ ಬೆಳಗಾವಿಯ ಮುಖ್ಯ ಕೋಟೆಯ ಪೂರ್ವ ಭಾಗಕ್ಕೆ ಮುಖಮಾಡಿ ಸಫಾ ಈ ಮಸೀದಿ ನಿರ್ಮಾಣಕ್ಕೆ ಕ್ರಿ.ಶ.೧೫೧೮ರಲ್ಲಿ ಅಡಿಪಾಯ ಹಾಕಿದನು ಎಂದು ತಿಳಿಸುವ ಪರ್ಶಿಯನ್ ಭಾಷೆಯಲ್ಲಿರುವ ಒಂದು ಶಾಸನ ಈ ಮಸೀದಿಯಲ್ಲಿ ದೊರೆತಿದೆ. ಈ ಶಾಸನದ ಕಾಲಮಾನ ಹಿಜರೆ ಶಕೆ ಪ್ರಕಾರ ೯೨೪(ಕ್ರಿ.ಶ.೧೫೧೮)ರಲ್ಲಿ ಹೊರಡಿಸಲಾಗಿದ್ದು ಈ ಶಾಸನದ ರಚನೆಕಾರ ಖ್ವಾಜಿ ನಿಮಾಮುದ್ಧೀನ ಅದ್ವಾನಿ. ಖುರಾಣಿನ ವಾಕ್ಯದೊಂದಿಗೆ ಪ್ರಾರಂಭವಾಗುವ ಇನ್ನೊಂದು ಪರ್ಶಿಯನ್ ಶಾಸನ ಇದೇ ಸಫಾ ಮಸೀದಿಯಲ್ಲಿ ದೊರೆತಿದೆ. ಇದರ ಕಾಲಮಾನ ಹಿಜರಿ ಶಕೆ ಪ್ರಕಾರ ೯೨೫ ರಜಬ್–೨೧ ಕ್ರಿ.ಶ. ೧೫೧೯ ಜುಲೈ ೧೯ರ ಅವಧಿಯದಾಗಿದ್ದು ಶಾಸನವು ಮಸೀದಿ ಈ ಸಫಾವನ್ನು ಅಸದ್‌ಖಾನ ಪೂರ್ಣಗೊಳಿಸಿದ ನಂತರ ಹೊರಡಿಸಿದಂತೆ ಕಾಣುತ್ತದೆ. ಈ ಶಾಸನವನ್ನು ನೂರಿ ಮತ್ತು ಅಹಮ್ಮದ ಮಗ ಹೈದರನು (ಅಸದ್‌ಖಾನ ಮೊಮ್ಮಗ) ರಚಿಸಿದ. ಈತ ಶ್ರೇಷ್ಠ ವಿದ್ವಾಂಸನಾಗಿದ್ದ ಎಂಬ ವಿಷಯವನ್ನು ಶಾಸನದಿಂದ ತಿಳಿದು ಬರುತ್ತದೆ.

ಬೆಳಗಾವಿ ನಗರದ ವಾಸಿಯಾದ ಶ್ರೀ ಬಾಬುರಾವ ಮನೆಯ ಮುಂದಿನ ಹಾಸುಗಲ್ಲಿನ ಮೇಲಿನ ಪರ್ಶಿಯನ್ ಭಾಷೆಯಲ್ಲಿರುವ ಒಂದು ಶಾಸನವು ಅಸದ್‌ಖಾನ ಸಫಾ–ಈ–ಮಸೀದಿಗೆ ದತ್ತಿಯಾಗಿ ನೀಡಿದ ಉಳುಮೆ ಭೂಮಿಯ ಎಲ್ಲೆಯನ್ನು ಉಲ್ಲೇಖಿಸುತ್ತದೆ. ಹಾಗೂ ಈ ಶಾಸನವು ಶಾಪಾಶಯ ವಾಕ್ಯದಿಂದ ಕೊನೆಗೊಳ್ಳುತ್ತದೆ. ಇದರ ಕಾಲಮಾನ ಕ್ರಿ.ಶ.೧೫೧೯ ಹಿಜರಿ ಶಕೆ ಪ್ರಕಾರ ೯೨೫ ಎಂದು ಉಲ್ಲೇಖಿಸುತ್ತದೆ.

ಈ ಮೂರು ಶಾಸನಗಳೂ ಅಸದಖಾನನ ಕಾಲದಲ್ಲಿ ನಿರ್ಮಾಣವಾದ ಸಫಾ ಈ ಮಸೀದಿ ಕುರಿತು ಉಲ್ಲೇಖಿಸುತ್ತವೆ. ಅಷ್ಟೇ ಅಲ್ಲದೆ ಅಸದ್‌ಖಾನ ಕೋಟೆಯ ಒಳಗಡೆ ಬದ್ರುದ್ದೀನ ಆರಿಫ್‌ರವರ ದರ್ಗಾವನ್ನು ನಿರ್ಮಿಸಿದ್ದಾನೆ. ಇದೇ ಕಾಲಘಟ್ಟದಲ್ಲಿ ಅರಮನೆ, ಖಾನಕಾಗಳು, ಮಸೀದಿಗಳು, ಕೋಟೆಯ ಒಳಭಾಗದಲ್ಲಿ ಕಛೇರಿ. ಮಹಲ್‌ಗಳನ್ನು ಸೈನಿಕರ ಮನೆಗಳು ಇನ್ನೂ ಹಲವಾರು ಸ್ಮಾರಕಗಳನ್ನು ನಿರ್ಮಿಸಿದನು. ಬೆಳಗಾವಿ ನಗರದ ಹೊರವಲಯದ ಯಳ್ಳೂರು ಕೋಟೆಯನ್ನು ಈತನೇ ನಿರ್ಮಿಸಿದನೆಂದು ಎಸ್.ಕೆ.ಜೋಶಿಯವರು ಅಭಿಪ್ರಾಯ ಪಟ್ಟಿದ್ದಾರೆ.[೬೬]

ಅಸದ್‌ಖಾನನು ಬೆಳಗಾವಿ ನಗರದಲ್ಲಿ ರಾಜನಂತೆ ವೈಭವಪೂರಿತವಾದ ಆಡಳಿತವನ್ನು ನಡೆಸಿ ಸುಮಾರು ಕ್ರಿ.ಶ.೧೫೪೯ರಲ್ಲಿ ಅಂದರೆ ೧೦೪ನೇ ವಯಸ್ಸಿನಲ್ಲಿ ಮರಣ ಹೊಂದಿದ. ಈತನಿಗೆ ಮತ್ತು ಇಬ್ರಾಹಿಂ ಆದಿಲ್‌ಶಾಹನಿಗು ಕೆಲವು ವಿಷಯಗಳ ಕುರಿತು ಕಲಹಕ್ಕೆ ಕಾರಣವಾಗಿತ್ತು. ಯೋಜನೆಯಂತೆ ಬೆಳಗಾವಿ ನಗರದ ೫ ಕಿ.ಮೀ. ಅಂತರದ ಮಂಡೊಳ್ಳಿಗೆ ಪ್ರಾರ್ಥನೆಗೆ ತೆರಳಿದಾಗ ಅಥವಾ ವಿಶ್ರಾಂತಿಗೆ ತೆರಳಿದಾಗ, ಹತ್ಯೆಗೈಯ್ಯಲಾಯಿತು ಎಂದು ಐತಿಹ್ಯಗಳೂ ಸಾಕ್ಷಿ ಒದಗಿಸಿವೆ.[೬೭] ಅಸದ್‌ಖಾನ ಬೆಳಗಾವಿಯಲ್ಲಿ ೩೮ ವರ್ಷಗಳ ಕಾಲ ಆಳ್ವಿಕೆ ಮಾಡಿ ಕರ್ನಾಟಕದ ಮಧ್ಯಕಾಲೀನ ಇತಿಹಾಸದಲ್ಲಿ ಸ್ಥಾನ ಪಡೆದ ಮಹಾದಂಡನಾಯಕನಾಗಿದ್ದಾನೆ. ಬೆಳಗಾವಿ ಇಂದು ನಗರ ಸ್ವರೂಪ ಪಡೆಯಲು ಮೂಲ ಕಾರಣಕರ್ತನಾಗಿದ್ದಾನೆ. ಬೆಳಗಾವಿಯಲ್ಲಿ ಹಲವು ಸಾಧು ಸಂತರಿಗೆ ಆಶ್ರಯ ನೀಡಿ ಜನ ಹಿತಕರ ಆಡಳಿತವನ್ನು ನಡೆಸಿ ಹಿಂದು-ಮುಸ್ಲಿಂ ಸಂಪ್ರದಾಯದ ಜನರಲ್ಲಿ ಶಾಶ್ವತವಾದ ಸ್ಥಾನ ಪಡೆದಿದ್ದಾನೆ.

ಅಸದ್‌ಖಾನ ಮರಣ ಹೊಂದಿದ ನಂತರ ಸುಲ್ತಾನ ಇಬ್ರಾಹಿಂ ಕ್ರಿ.ಶ.೧೫೫೦ರಲ್ಲಿ ಶೇರಖಾನ ಎಂಬ ಅಧಿಕಾರಿಯನ್ನು ನೇಮಿಸಿದನು. ಈತನು ಕೂಡಾ ಒಬ್ಬ ಶೂರ, ಬುದ್ಧಿವಂತ ಆಡಳಿತಗಾರನಾಗಿದ್ದನು. ಈತ ಕ್ರಿ ಶ ೧೫೫೦ರಲ್ಲಿ ಸಮುದ್ರ ತೀರ ಪ್ರದೇಶದ ರಾಷ್ಟ್ರಗಳೊಂದಿಗೆ ವ್ಯಾಪಾರ ಕೈಗೊಳ್ಳುವ ಉದ್ದೇಶವನ್ನು ಇಟ್ಟುಕೊಂಡು ಈತ ಬೆಳಗಾವಿಯ ಸುತ್ತಮುತ್ತಲಿನ ಒಂದು ಪ್ರದೇಶವಾದ ಶಹಪುರ ಎಂಬ ಹಳ್ಳಿಯನ್ನು ಆಯ್ಕೆ ಮಾಡಿಕೊಂಡು ಅದರ ಸುತ್ತಲೂ ಭದ್ರವಾದ ಕೋಟೆಯನ್ನು ನಿರ್ಮಿಸಿದನು. ಇಲ್ಲಿ ಒಂದು ವಾಣಿಜ್ಯ ಮಾರುಕಟ್ಟೆ ಸ್ಥಾಪಿಸಿದನು. ವಿದೇಶಗಳಿಂದ ನೆರೆಯ ರಾಜ್ಯಗಳಿಂದ ಮುತ್ತು ರತ್ನಗಳ ವ್ಯಾಪಾರಿಗಳನ್ನು ಆಹ್ವಾನಿಸಿ ಒಂದು ಪ್ರಸಿದ್ಧ ವ್ಯಾಪಾರಿ ಕೇಂದ್ರವಾಗಿ ರೂಪಿಸಿದನು. ಇಲ್ಲಿ ರೇಷ್ಮೆ ಕೈಗಾರಿಕೆಗಳನ್ನು ಸ್ಥಾಪಿಸಿದನು. ಈ ಪ್ರದೇಶದಲ್ಲಿ ಪೇಟೆಯನ್ನು ನಿರ್ಮಿಸಲು ಹಲವು ಕಾರಣಗಳಿದ್ದವು. ಒಂದು ಪಾಶ್ಚಿಮಾತ್ಯ ರಾಷ್ಟ್ರಗಳೊಂದಿಗೆ ವ್ಯಾಪಾರ ವಹಿವಾಟು ನಡೆಸಲು, ಬೆಳಗಾವಿಯು ಆದಿಲ್‌ಶಾಹಿಗಳ ರಾಜ್ಯದ ಗಡಿ ಪ್ರದೇಶವಾಗಿತ್ತು. ಆದ ಕಾರಣ ಇತರೆ ರಾಜ್ಯಗಳಿಂದ ತಮ್ಮ ಅವಶ್ಯ ವಸ್ತುಗಳನ್ನು ಪೂರೈಸಕೊಳ್ಳಲು ಈ ವ್ಯಾಪರಿ ಕೇಂದ್ರವನ್ನು ಸ್ಥಾಪಿಸಿದನು. ಆದರೆ ಈಗ ಅಲ್ಲಿ ಯಾವುದೇ ಕೋಟೆ ಅವಶೇಷಗಳು ಕಂಡು ಬರುವುದಿಲ್ಲ. ಆಧುನಿಕ ನಗರ ನಿರ್ಮಾಣದಿಂದ ಅವಶೇಷಗಳು ಸಿಗುವುದು ವಿರಳ. ಆತ ನಿರ್ಮಿಸಿದ ಶಾಹಪೇಟ ಇಂದಿಗೂ ಮುಂದುವರೆದಿದೆ.[೬೮]

ಶೇರಖಾನ ಆಡಳಿತದ ನಂತರ ಬೆಳಗಾವಿ ಪ್ರದೇಶದ ಭಾಗವನ್ನು ಎರಡನೇ ಅಲಿ ಆದಿಲ್‌ಶಾಹನು ಕ್ರಿ.ಶ.(೧೫೫೮-೧೫೮೦)ರಲ್ಲಿ ಅಸದ್‌ಖಾನನ ಮಗನಾದ ಮಹಮ್ಮದ ಕಿಶ್ವರ್‌ಖಾನನಿಗೆ ಕ್ರಿ.ಶ. ೧೫೫೯ರಲ್ಲಿ ಬೆಳಗಾವಿ, ರಾಯಭಾಗ ಹಾಗು ಹುಕ್ಕೇರಿ ಪ್ರದೇಶಗಳನ್ನು

ನೀಡಿದನು.[೬೯] ಕಿಶ್ವರಖಾನನು ತನ್ನ ತಂದೆಯಂತೆ ಶೂರನು, ಚತುರ ಆಡಳಿತಗಾನನಾಗಿದ್ದು ಹಾಗೂ ಕಲಾ ಪ್ರಿಯನಾಗಿದ್ದನು. ಈತನ ಆಳ್ವಿಕೆಯ ಸಂದರ್ಭದಲ್ಲಿ ಜೋಡ ಗುಮ್ಮಟವುಳ್ಳ ಒಂದು ಮಸೀದಿ, ದರ್ಗಾ, ಹಾಗೂ ಆರಕ್ಷಣಾ ಸರೆಮನೆಯನ್ನು ಕೂಡಾ ಬೆಳಗಾವಿ ನಗರದಲ್ಲಿ ನಿರ್ಮಿಸಿದನು. ಹೀಗೆ ಕಿಶ್ವರಖಾನ ಕೆಲವೇ ವರ್ಷಗಳ ಕಾಲ ಆಳ್ವಿಕೆ ಮಾಡಿದರು ಸುಭದ್ರವಾದ ಆಡಳಿತವನ್ನು ಒದಗಿಸಿ ಬೆಳಗಾವಿ ಇತಿಹಾಸದಲ್ಲಿ ಶಾಶ್ವತವಾದ ಸ್ಥಾನ ಪಡೆದನು. ಈತ ವಿಜಾಪುರ ಆದಿಲ್‌ಶಾಹಿ ಆಡಳಿತದಲ್ಲಿ ಮುಂದುವರೆದು ಈತ ಅಲ್ಲಿಯೇ ಅಸುನೀಗಿದನು.

**ಇಬ್ರಾಹಿಂ ಆದಿಲ್‌ಶಾಹ(ಕ್ರಿ.ಶ.೧೬೮೦ರಿಂದ ೧೬೨೬)**

ಆದಿಲ್‌ಶಾಹಿ ಸುಲ್ತಾನರಲ್ಲೇ ಪ್ರಖ್ಯಾತನಾದ ಈತ ಕಲಾಸಂಪನ್ನ, ಶ್ರೇಷ್ಠ ವಿದ್ವಾಂಸ ಚತುರ ಆಡಳಿತಗಾರ, ಈತ ಬೆಳಗಾವಿ ಭಾಗದ ಅಭಿವೃದ್ಧಿಗೆ ಕಾರಣನಾಗಿದ್ದಾನೆ, ಕ್ರಿ.ಶ. ೧೫೮೩ರಲ್ಲಿ ಬೆಳಗಾವಿಗೆ ಭೇಟಿಯಿತ್ತ ರಾಲ್ಫ್‌ಪಿಚ್ ಬೆಳಗಾವಿಯನ್ನು ಒಂದು ಪ್ರಸಿದ್ಧ ವ್ಯಾಪಾರ ಕೇಂದ್ರವಾಗಿತ್ತು ಎಂದು ಉಲ್ಲೇಖಿಸಿದ್ದಾನೆ. ಇಲ್ಲಿ ಮುತ್ತು ರತ್ನ ವ್ಯಾಪಾರ ಮತ್ತು ಕೈಗಾರಿಕೆಗಳ ಕುರಿತು ಉಲ್ಲೇಖಿಸಿದ್ದಾನೆ. ಒಂದನೇ ಅಲಿ ಆದಿಲ್‌ಶಾಹನಿಗೆ ಮಕ್ಕಳಿಲ್ಲದ ಕಾರಣ ತನ್ನ ಅಣ್ಣನ ಮಗನಾದ ಇಬ್ರಾಹಿಂನಿಗೆ ಪಟ್ಟಕಟ್ಟಲಾಯಿತು.

ಇಬ್ರಾಹಿಂ ಅಧಿಕಾರಕ್ಕೆ ಬಂದ ನಂತರ ತನ್ನ ಸಹೋದರನಾದ ಇಸ್ಮಾಯಿಲನನ್ನು ಬೆಳಗಾವಿ ಸೆರೆಮನೆಯಲ್ಲಿ ರಾಜಬಂಧಿಯಾಗಿ ಇಡಲಾಯಿತು. ಇಬ್ರಾಹಿಂ ಉತ್ತರದ ವೈರಿಯಾದ ಗುರ್ಹಾನ್‌ನು ಬೆಳಗಾವಿ ಸೆರೆಮನೆಯಲ್ಲಿದ್ದ ಇಸ್ಮಾಯಿಲ್‌ನೊಂದಿಗೆ ರಹಸ್ಯವಾಗಿ ಪತ್ರ ವ್ಯವಹಾರ ನಡೆಸಿ ವಿಜಾಪುರ ಸಿಂಹಾಸನಕ್ಕಾಗಿ ತನ್ನ ವೈರಿಯಾದ ಇಬ್ರಾಹಿಂ ವಿರುದ್ಧ ಬಂಡಾಯವೇಳುವಂತೆ ಪ್ರಚೋದಿಸಿ ಹೇರಳವಾದ ಸಂಪತ್ತಿನ ಸಹಾಯವನ್ನು ಮಾಡಿದನು. ಬೆಳಗಾವಿಯ ನೆರೆ ಹೊರೆಯ ಜಹಗೀರದಾರರಾಗಿದ್ದ ಅಂಕುಶ್‌ಖಾನ ಮತ್ತು ಐನ್–ಉಲ್– ಮುಲ್ಕರ ಬೆಂಬಲವನ್ನು ಪಡೆಯಲಾಯಿತು. ಇವರಿಬ್ಬರು ಜೊತೆಯಾಗಿ ಪಶ್ಚಿಮದಿಂದ ರಾಜಧಾನಿ ವಿಜಾಪುರದ ಮೇಲೆ ದಾಳಿ ಮಾಡುವಂತೆ ವ್ಯವಸ್ಥೆ ಮಾಡಲಾಯಿತು. ಬೆಳಗಾವಿಯಲ್ಲಿರುವ ವಿಜಾಪುರ ಸೈನ್ಯದ ಮುಖ್ಯಸ್ಥನಾದ ಸಾವಂತರಾಯನನ್ನು ತನ್ನತ್ತ ಒಲಿಸಿಕೊಳ್ಳುವಲ್ಲಿ ಗುರ್ಹಾನ್‌ನನು ಯಶಸ್ವಿಯಾದನು. ಕ್ರಿ.ಶ.೧೫೯೪ ಮೇ ತಿಂಗಳು ೨೨ರಂದು ಸಾವಂತರಾಯನು ಎರಡನೇ ಇಸ್ಮಾಯಿಲನ ಒಡೆತನವನ್ನು ಒಪ್ಪಿ ಸೈನ್ಯದಲ್ಲಿದ್ದ ವಿಜಾಪುರದ ನಿಷ್ಠಾವಂತ ಸೈನಿಕರನ್ನು ನಾಶಗೊಳಿಸದನು. ವಿಜಾಪುರದ ರಾಜ್ಯಪಾಲನು ಕೂಡಾ ಇಸ್ಮಾಯಿಲ್‌ನ ಪರವಾದನು. ಇವನನ್ನು ಅನುಸರಿಸಿದ ಮಿರಜ್ ಪಡೆಯಲ್ಲಿದ್ದ ಅಧಿಕಾರಿಗಳು ಬಂಡಾಯ ಸುಲ್ತಾನ ರಾಜಕುಮಾರ ಇಸ್ಮಾಯಿಲ್‌ನ ಒಡೆತನವನ್ನು ಒಪ್ಪಿದರು.

ಇಸ್ಮಾಯಿಲ್‌ನು ಬೆಳಗಾವಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸ್ವತಂತ್ರ ಸುಲ್ತಾನನೆಂದು ಘೋಷಿಸಿಕೊಂಡು ಬೆಳಗಾವಿ ಪ್ರದೇಶದಿಂದ ಆಳ್ವಿಕೆ ಪ್ರಾರಂಭಿಸಿರುವುದರಿಂದ ಬೆಳಗಾವಿ ವಿಜಾಪುರ ಆದಿಲ್‌ಶಾಹಿಗಳ ಉಪರಾಜಧಾನಿಗಿತ್ತೆಂದು ದೃಡಪಟ್ಟಿದೆ. ಇಸ್ಮಾಯಿಲ್‌ನು ಅಂಕುಶಖಾನ ಮತ್ತು ಐನ್-ಉಲ್-ಮುಲ್ಕರನ್ನು ರಾಜ್ಯದ ಆಡಳಿತದ ಸಲಹೆಗಾರರನ್ನಾಗಿ ನೇಮಿಸಿ ದರ್ಬಾರ ನಡೆಸಿದನು. ಈತನ ಆಡಳಿತಕ್ಕೆ ಬೆಳಗಾವಿ ಸುತ್ತಮುತ್ತಲಿನ ಹುಕ್ಕೇರಿ, ರಾಯಭಾಗ, ಮಿರಜ ಭಾಗಗಳು ಒಳಪಟ್ಟವು. ಬೆಳಗಾವಿಯಲ್ಲಿ ಇಸ್ಮಾಯಿಲ್ ಸ್ವತಂತ್ರನಾಗಿ ಆಡಳಿತ ನಡೆಸುವುದರ ಸುದ್ದಿ ತಿಳಿದ ತಕ್ಷಣ ಇಬ್ರಾಹಿಂ ೨೭/೧೧/೧೫೫೫ರಂದು ಬೆಳಗಾವಿಯಲ್ಲಿದ್ದ ಇಸ್ಮಾಯಿಲನನ್ನು ಸೆದೆಬಡೆಯಲು ಹೊರಟನು. ಇಬ್ರಾಹಿಂನ ಮುಖ್ಯಸೇನಾಧಿಪತಿಯಾದ ಹಮ್ಮೀರಖಾನನು ಮೋಸದಿಂದ ಇಸ್ಮಾಯಿಲ್‌ನನ್ನು ಬಂಧಿಸಿ ಆತನ ಕಣ್ಣು ಕೀಳಿಸಿ ಸೆರೆಮನೆಗೆ ತಳ್ಳಿದರು. ಇಸ್ಮಾಯಿಲ್ ಆದಿಲ್‌ಶಾಹ ಐದು ತಿಂಗಳುಗಳ ಕಾಲ ಬೆಳಗಾವಿಯನ್ನು ತನ್ನ ಆಡಳಿತದ ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ಕುರುಹುಗಳು ಬೆಳಗಾವಿ ನಗರದಲ್ಲಿ ಕಂಡು ಬರುತ್ತವೆ.[೭೦]

ಎರಡನೇಯ ಇಬ್ರಾಹಿಂ ಆದಿಲ್‌ಶಾಹ ನಂತರ ಅವನ ಮಗನಾದ ಮಹಮ್ಮದ ಕ್ರಿ.ಶ. ೧೬೨೭ ರಿಂದ ೧೬೫೬ರ ಆಳ್ವಿಕೆ ಕಾಲದಲ್ಲಿ ಬೆಳಗಾವಿ ಮುಖ್ಯ ಕೋಟೆಯ ಒಂದು ಭಾಗದಲ್ಲಿ ಅತಿಯಾದ ಮಳೆಯಿಂದ ಗೋಡೆ ಕುಸಿದುಬಿದ್ದಿತು. ಬೆಳಗಾವಿ ಕೋಟೆಯ ಅಮೀರನಾದ ಅಬ್ದುಲ್‌ಹುಸೇನ್‌ನು ಆ ಹಿಜರಿ ಶಕೆ ಪ್ರಕಾರ ೧೦೪೫ರಲ್ಲಿ ಅಂದರೆ ಕ್ರಿ.ಶ.೧೬೩೬ ಪುನರ್ ನಿರ್ಮಿಸಿದನು ಎಂದು ತಿಳಿಸುವ ಶಾಸನ ಕೋಟೆಯ ಒಳಭಾಗದಲ್ಲಿ ದೊರೆತಿದೆ. ಈ ಶಾಸನವು ಪರ್ಷಿಯನ್ ಭಾಷೆಯಲ್ಲಿದೆ. ಈಗ ವಿಜಾಪುರ ವಸ್ತುಸಂಗ್ರಹಾಲಯದಲ್ಲಿದೆ. ಈ ಶಾಸನದಿಂದ ಎರಡನೇಯ ಮಹಮದನ ಆಳ್ವಿಕೆಯ ಕಾಲಘಟ್ಟದಲ್ಲಿ ಬೆಳಗಾವಿಯು ವಿಜಾಪುರದ ವಶದಲ್ಲಿತ್ತು ಎಂದು ದೃಢಪಡಿಸುತ್ತದೆ.[೭೧]

ಎರಡನೇ ಅಲಿ ಆದಿಲ್‌ಶಾಹ ಕ್ರಿ.ಶ.೧೬೫೬ರಲ್ಲಿ ಬೆಳಗಾವಿ ಜಹಗೀರನ್ನು ಸಿದ್ಧಿ ರೆಹಾನ್ ಎಂಬಾತನಿಗೆ ನೀಡಲಾಯಿತು ಎನ್ನಲಾಗಿದೆ.[೭೨] ಕ್ರಿ.ಶ.೧೬೭೨ರಲ್ಲಿ ಎರಡನೇಯ ಅಲಿ ಆದಿಲ್‌ಶಾಹ ಮರಣ ಹೊಂದಿದ ನಂತರ ಆತನ ಐದು ವರ್ಷದ ಮಗ ಸಿಕ್ಕಂದರ್ ಶಹಾ ಪಟ್ಟಕ್ಕೆ ಬಂದನು. ಈತ ಆದಿಲ್‌ಶಾಹಿಗಳ ಕೊನೆಯ ಸುಲ್ತಾನ. ಈತ ಅಪ್ರಾಪ್ತ ವಯಸ್ಕನಾದ ಕಾರಣ ಹಾಗೂ ಔರಂಗಜೇಬ ಗೋಲ್ಕಂಡ ಯುದ್ಧದಲ್ಲಿ ತೊಡಗಿದ ಕಾರಣ ಶಿವಾಜಿಯು ಕ್ರಿ.ಶ. ೧೬೭೩ರಲ್ಲಿ ಮಿರಜ, ಬೆಳಗಾವಿ, ಲೊಂಡಾ ಭಾಗಗಳ ಮೇಲೆ ದಾಳಿ ಮಾಡಿ ವಶಪಡಿಸಿಕೊಂಡನು. ಇದೇ ಸಂದರ್ಭದಲ್ಲಿ ಔರಂಗಜೇಬ ಕ್ರಿ.ಶ.೧೬೮೬ರಲ್ಲಿ ವಿಜಾಪುರಕ್ಕೆ ಮುತ್ತಿಗೆ ಹಾಕಿ ವಿಜಾಪುರದ

ಆದಿಲ್‌ಶಾಹಿಗಳ ಆಡಳಿತವನ್ನು ಕೊನೆಗೊಳಿಸಿದನು. ಔರಂಗಜೇಬ ತನ್ನ ದಾಳಿಯನ್ನು ಶಿವಾಜಿ ವಶಪಡಿಸಿಕೊಂಡ ಪ್ರದೇಶಗಳ ಮೇಲೆ ದಾಳಿ ಮಾಡಿ ತನ್ನ ವಶಕ್ಕೆ ಪಡೆದುಕೊಂಡನು. ಆಗ ಬೆಳಗಾವಿಯು ಪೂರ್ಣವಾಗಿ ಈತನ ಆಧೀನಕ್ಕೆ ಒಳಪಟ್ಟಿತು.[೨೩]

**ಮೊಘಲರು**

ಕ್ರಿ.ಶ. ೧೬೮೬ರಲ್ಲಿ ಔರಂಗಜೇಬ ವಿಜಾಪುರವನ್ನು ವಶಪಡಿಸಿಕೊಂಡ ನಂತರ ಆತ ದಕ್ಷಿಣದ ಕಡೆಗೆ ದಾಳಿ ನಡೆಸಿ ಹಲವು ಪ್ರದೇಶಗಳನ್ನು ವಶಪಡಿಸಿಕೊಂಡನು. ಈತ ವಶಪಡಿಸಿಕೊಂಡ ಎಲ್ಲ ಭಾಗಗಳನ್ನು ಒಂದುಗೂಡಿಸಿ ಸುಭಾ ರಚಿಸಿದನು. ಬೆಳಗಾವಿ ಸುಭಾದ ಆಡಳಿತವನ್ನು ತನ್ನ ಮಗನಾದ ಮೂಆಜಂನಿಗೆ ಒಪ್ಪಿಸಿದ. ಈತನ ಆಳ್ವಿಕೆಯಿಂದ ಬೆಳಗಾವಿ ನಗರಕ್ಕೆ ಆಜಂ ನಗರವೆಂದು ಕರೆಯಲಾಯಿತು.[೨೪] ಇದೇ ಸಮಯದಲ್ಲಿ ಮೊಘಲರಿಗೆ ಮತ್ತು ಮರಾಠರಿಗೆ ಕಲಹಗಳು ಏರ್ಪಟ್ಟು ಬೆಳಗಾವಿ ಸುತ್ತಮುತ್ತಲಿನ ಪ್ರದೇಶದ ಭಾಗದ ಆಡಳಿತವನ್ನು ಸವಣೂರಿನ ನವಾಬ್‌ನಾದ ರವುಪ್‌ಖಾನನಿಗೆ ಆಜಂನು ವಹಿಸಿಕೊಟ್ಟನು. ಆಗ ನವಾಬನಾದ ರವುಪ್‌ಖಾನನು ತನ್ನ ಗವರ್ನರನಾದ ಇಲಾಚಿಬೇಗ್ ಎಂಬುವನನ್ನು ಬೆಳಗಾವಿ ಆಡಳಿತಗಾರ ನನ್ನಾಗಿ ನೇಮಿಸಿದ ಎನ್ನಲಾಗಿದೆ.[೨೫]

**ಸವಣೂರ ನವಾಬರು**

ಸವಣೂರ ನವಾಬರ ಕುರಿತು ಆಯನ್ ಖಾನಾಪುರೆಯವರು ಔರಂಗಜೇಬನ ಮಗ ಮುಆಜಂ ಬೆಳಗಾವಿಯಲ್ಲಿ ಆಡಳಿತ ಮಾಡುವ ಸಂದರ್ಭದಲ್ಲಿ ಹೈದ್ರಾಬಾದಿನ ನಿಜಾಮ ಕ್ರಿ.ಶ. ೧೭೨೫ರಲ್ಲಿ ಮೂಆಜಂನನ್ನು ಸೋಲಿಸಿ ಬೆಳಗಾವಿಯನ್ನು ಸವಣೂರಿನ ನವಾಬನ ವಶಕ್ಕೆ ನೀಡಿದ ಎನ್ನಲಾಗಿದೆ.[೨೬] ಮೊಘಲರ ಸಾಮಂತರಾಗಿ ಆಳಿದ ಸವಣೂರಿನ ನವಾಬರು ಬೆಳಗಾವಿ ಒಂದು ಉಪ ಆಡಳಿತ ವಿಭಾಗವನ್ನಾಗಿ ಮಾಡಿಕೊಂಡು ಆಳಿದರು. ಮರಾಠರೊಂದಿಗೆ ಕಲಹವೇರ್ಪಟ್ಟು ಬೆಳಗಾವಿ ಪ್ರದೇಶ ಒಮ್ಮೆ ಮರಾಠರ ಮತ್ತು ನವಾಬರ ಭಾಗವಾಗಿ ಹಸ್ತಾಂತರವಾಗತೊಡಗಿತು. ಬೆಳಗಾವಿ ಅವರ ರಾಜ್ಯಗಳ ಪ್ರಮುಖ ಗಡಿಭಾಗದ ಪ್ರದೇಶವಾಗಿತ್ತು. ಕ್ರಿ.ಶ. ೧೭೩೦–೧೭೩೫ರ ಕಾಲಘಟ್ಟದಲ್ಲಿ ಮರಾಠರ ಅಂತಃಕಲಹದಲ್ಲಿ ನವಾಬನಾದ ಅಬ್ದುಲ್ ನಜೀರಖಾನನು ಕೊಲ್ಹಾಪುರದ ಮಹಾರಾಜನಾದ ಎರಡನೇ ಸಂಭಾಜಿಗೆ ಸಹಾಯ ನೀಡಿ ಬೆಳಗಾವಿ ಪ್ರದೇಶವನ್ನು ತನ್ನ ವಶಕ್ಕೆ ತೆಗೆದುಕೊಂಡನು.[೨೭]

ಈ ರೀತಿಯಾಗಿ ಬೆಳಗಾವಿ ಪ್ರದೇಶದ ಕೆಲವು ಭಾಗಗಳನ್ನು ನವಾಬರು ಮತ್ತು ಮರಾಠರು ಒಪ್ಪಂದದ ಪ್ರಕಾರ ತಮ್ಮ ತಮ್ಮಲ್ಲಿ ಹಂಚಿಕೊಂಡು ಆಳತೊಡಗಿದರು. ಕ್ರಿ.ಶ.

೧೭೫೪ ರಲ್ಲಿ ಮರಾಠರು ಮೈಸೂರು ಮೇಲೆ ದಾಳಿ ಮಾಡಿ ಮರಳುವ ಸಂದರ್ಭದಲ್ಲಿ ಬೆಳಗಾವಿಯಲ್ಲಿದ್ದ ಸವಣೂರು ನವಾಬರ ಗವರ್ನರನಾದ ಇಲಾಚಿ ಬೇಗನನ್ನು ಸೋಲಿಸಿ ಬೆಳಗಾವಿಯನ್ನು ವಶಪಡಿಸಿಕೊಂಡರು. ನಂತರ ಬೆಳಗಾವಿಯಲ್ಲಿ ಮರಾಠ ಪೇಶ್ವೆಗಳ ಆಡಳಿತ ಮುಂದುವರೆಯಿತು. ಪೇಶ್ವೆಗಳ ಆಡಳಿತದ ಸಂದರ್ಭದಲ್ಲಿ ಬ್ರಿಟಿಷ್ ಆಡಳಿತಗಾರನಾದ ಮನ್ರೊ ೨೦ ಮಾರ್ಚ ೧೮೧೮ರಲ್ಲಿ ಬೆಳಗಾವಿ ಮೇಲೆ ದಾಳಿ ಮಾಡಿ ೨೨ ದಿನಗಳ ಕಾಲ ಕೋಟೆಗೆ ಮುತ್ತಿಗೆ ಹಾಕಿ ಕೊನೆಗೆ ೧೨ ಏಪ್ರಿಲ್ ೧೮೧೮ರಲ್ಲಿ ಮನ್ರೊ ವಶಪಡಿಸಿಕೊಂಡನು. ಮುಂದೆ ಬೆಳಗಾವಿಯು ಸ್ವತಂತ್ರವಾಗುವವರೆಗೂ ಇವರ ಅಧೀನಕ್ಕೆ ಒಳಪಟ್ಟಿತು.[೭೮]

ಈ ರೀತಿಯಾಗಿ ಬೆಳಗಾವಿ ಪ್ರದೇಶವನ್ನು ಹಿಂದೂ ಮುಸ್ಲಿಂ, ಕ್ರೈಸ್ತ ಧರ್ಮದ ಆಡಳಿತಗಾರರು ಆಳ್ವಿಕೆ ಮಾಡಿದರು. ಕರ್ನಾಟಕದ ಇತಿಹಾಸದುದ್ದಕ್ಕೂ ಒಂದಲ್ಲ ಒಂದು ರೀತಿಯಲ್ಲಿ ಬೆಳಗಾವಿ ಮಹತ್ವದ ಪಾತ್ರ ವಹಿಸಿತು. ಪ್ರತಿಯೊಂದು ರಾಜ ಮನೆತನಗಳು ತಾವು ಆಳಿದ ಪ್ರದೇಶದ ಮೇಲೆ ತಮ್ಮದೇ ಆದ ರಾಜಕೀಯ ಮತ್ತು ಸಾಂಸ್ಕೃತಿಕ ಪ್ರಭಾವ ಬೀರಿರುತ್ತಾರೆ. ಈ ನೆಲದಲ್ಲಿ ಶಾತವಾಹನರ ವೈಷ್ಣವ, ಬುದ್ಧರ ಗುಣಮೌಲ್ಯ, ಕದಂಬರ ಕ್ಷಾತ್ರ ತೇಜ, ಧರ್ಮ ಸಹಿಷ್ಣುತೆ, ರಟ್ಟರ ಜೈನ ಜೀವನ ಶೈಲಿ, ಬಹುಮನಿ ಆದಿಲ್‌ಶಾಹಿಗಳ ಮುಸ್ಲಿಂ ಸಮತಾಭಾವ, ಮರಾಠರ ಹಿಂದುತ್ವ ಗುಣಗಳ ಉತ್ತಿ, ಭಿತ್ತಿ ಫಲ ನೀಡಿವೆ. ಈ ಭಾಗದಲ್ಲಿ ಹಿಂದೂ ಮುಸ್ಲಿಂ ಆಡಳಿತದ ಪ್ರಭಾವವನ್ನು ಇಂದಿಗೂ ಕಾಣಬಹುದು.

**ಅಡಿಟಿಪ್ಪಣಿಗಳು**

೧. ಭಾರತೀಯ ಸರ್ವೇಕ್ಷಣಾ ಇಲಾಖೆ ಧಾರವಾಡ ವಿಭಾಗದಿಂದ ಪ್ರಕಟಗೊಂಡ ಬೆಳಗಾವಿ ನಗರ ಸ್ಮಾರಕಗಳ ಜಾಹಿರಾತು ಪತ್ರಿಕೆ.

೨. ಬೆಳಗಾವಿ ಭೂಗೋಳ, ಪು.೧೩೯

೩. ನೇಗಿನಹಾಳ ಪ್ರಬಂಧಗಳು, ಪು.೩

೪. ವೇಣುವಾದ, ಪು.೩

೫. ಬೆಳಗಾಪಿ ಸಂಸ್ಕ್ರತಿ, ಪು.೪

೬. ಬೆಳಗಾವಿ ಸಂಸ್ಕ್ರತಿ, ಪು.೩೧

೭. ನೇಗಿನಹಾಳ ಪ್ರಬಂಧಗಳು. ಪೂರ್ವೋಕ್ತ, ಪು.೫–೬

೮. ಬೆಳಗಾವಿ ಜಿಲ್ಲೆ ಭವ್ಯ ಪರಂಪರೆ, ಪು.೩೩

೯. ಬೆಳಗಾವಿ ವಾಸ್ತು ಶಿಲ್ಪ ನಿಧಿ, ಪು.೧೪–೧೫

೧೦. ಬೆಳಗಾವಿ ಭವ್ಯ ಪರಂಪರೆ, ಪು.೪೬

೧೧. ಬೆಳಗಾವಿ ಜಿಲ್ಲೆಯ ಐತಿಹಾಸಿಕ ಪಕ್ಷಿನೋಟ, ಪು.೮೪

೧೨. ಬೆಳಗಾವಿ ಸಂಸ್ಕ್ರತಿ. ಪೂರ್ವೋಕ್ತ, ಪು.೩೨

೧೩. ಅದೇ, ಪು.೫೧

೧೪. ಅದೇ, ಪು.೯

೧೫. ನನ್ನ ಬೆಳಗಾವಿ, ಪು.೩

೧೬. ಬೆಳಗಾವಿ ಸಂಸ್ಕೃತಿ, ಪು.೩

೧೭. ಬೆಳಗಾವಿ:ಸಾಂಸ್ಕೃತಿಕ ಅಧ್ಯಯನ. ಪಿಎಚ್,ಡಿ ಅಪ್ರಕಟಿತ ಪ್ರಬಂಧ ಕನ್ನಡ ವಿದ್ಯಾಲಯ ಹಂಪಿ, ಪು.೩೫

೧೮. ಬೆಳಗಾವಿ ಸಂಸ್ಕೃತಿ, ಪು.೯

೧೯. ಬೆಳಗಾವಿ ಜಿಲ್ಲೆ ವಾಸ್ತು ಶಿಲ್ಪ ನಿಧಿ, ಪು.೪

೨೦. ಬೆಳಗಾವಿ ಜಿಲ್ಲೆ ಭವ್ಯ ಪರಂಪರೆ, ಪು.೧

೨೧. ನೇಗಿನಹಾಳ ಪ್ರಬಂಧಗಳು, ಪು.೫೨

೨೨. ಬೆಳಗಾವಿ ಭವ್ಯ ಪರಂಪರೆ, ಪು.೧೭

೨೩. ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.೧೪

೨೪. ಜೈನ ಪರಂಪರೆ ಬೆಳಗಾವಿ ಪ್ರಾದೇಶಿಕ ಕೊಡುಗೆ, ಪು.೫

೨೫. ಬೆಳಗಾವಿ ಭವ್ಯ ಪರಂಪರೆ, ಪು.೧

೨೬. ಅದೇ, ಪು.೧೯

೨೭. ಅದೇ, ಪು.೧೫

೨೮. ಬೆಳಗಾವಿ ಸಂಸ್ಕ್ರತಿ, ಪು.೧೮

೨೯. ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.೧೬

೩೦. ಅದೇ, ಪು.೧೭

೩೧. ಬೆಳಗಾವಿ ಭವ್ಯ ಪರಂಪರೆ, ಪು.೪೧

೩೨. ಬೆಳಗಾವಿ ಜಿಲ್ಲೆ ಭವ್ಯ ಪರಂಪರೆ, ಪು.೫೬

೩೩. ಬೆಳಗಾವಿ ಬೆಳಕು, ಪು.೧೮

೩೪. ಬೆಳಗಾವಿ ಜಿಲ್ಲೆಯ ಐತಿಹಾಸಿಕ ಪಕ್ಷಿನೋಟ, ಪು.೮೦

೩೫. ಬೆಳಗಾವಿ ಸಂಸ್ಕೃತಿ, ಪು.೧೮

೩೬. ಬೆಳಗಾವಿ ಭವ್ಯ ಪರಂಪರೆ, ಪು.೩೫

೩೭. ಅದೇ, ಪು.೪೬

೩೮. ಅದೇ, ಪು.೪೬

೩೯. ಅದೇ, ಪು.೬೬

೪೦. ಅದೇ, ಪು.೬೬

೪೧. ಅದೇ, ಪು.೪೫

೪೨. ಅದೇ, ಪು.೪೬

೪೩. ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ, ಪು.೨೧

೪೪. ವೇಣು ಸಂಪದ, ಪು.೦೭

೪೫. ಅದೇ, ಪು.೦೨

೪೬. ಇತಿಹಾಸ ದರ್ಶನ, ಪು.೧೦೨

೪೭. ಕರ್ನಾಟಕ ಚರಿತ್ರೆ, ಸಂ.೪, ಪು.೨೨

೪೮. ಬೆಳಗಾವಿ ಗ್ಯಾಸೆಟಿಯರ್, ಬೆಂಗಳೂರು, ಪು.೧೦೧

೪೯. ಕರ್ನಾಟಕ ಚರಿತ್ರೆ, ಪು.೨೪

೫೦. ಬೆಳಗಾವಿ ಗ್ಯಾಸೆಟಿಯರ್, ಬೆಂಗಳೂರು, ಪು.೧೦೧

೫೧. ಬೆಳಗಾವಿ ಜಿಲ್ಲೆ ಭವ್ಯ ಪರಂಪರೆ, ಪು.೭೮

೫೨. ಗ್ಯಾಸೆಟಿಯರ ಮುಂಬೈ ಇಲಾಖೆಗೆ ಸೇರಿದ ಕನಾಟಕ ಭಾಗದ್ದು, ಪು.೩೪

೫೩. ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.೭೮

೫೪. ಬೆಳಗಾವಿ ಭವ್ಯ ಪರಂಪರೆ, ಪು.೭೧

೫೫. ಅದೇ, ಪು.೭೨

೫೬. ಅದೇ, ಪು.೭೨

೫೭. ಅದೇ, ಪು.೭೨

೫೮. ಕರ್ನಾಟಕ ಯಾತ್ರೆ, ಪು.೨೩೮

೫೯. ಕರ್ನಾಟಕ ಚರಿತ್ರೆ, ಸಂ.೪, ಪು.೧೫೩

೬೦. ಗ್ಯಾಸೆಟಿಯರ ಮುಂಬೈ ಇಲಾಖೆಗೆ ಸೇರಿದ ಕನಾಟಕ ಭಾಗದ್ದು, ಪು.೩೪

೬೧. ಬೆಳಗಾವಿ ಜಿಲ್ಲೆ ಭವ್ಯ ಪರಂಪರೆ, ಪು.೭೪

೬೨. ಬುಸಾತೀನ ಸಲಾತಿನ, ಪು.೪೭೨

೬೩. ಸಂದರ್ಶನ ಅಸದಖಾನ ದರ್ಗಾದ ಮುಜಾವರ ನೀಡಿದ ಮಾಹಿತಿ

೬೪. ಬಿಜಾಪುರದ ಆದಿಲ್‌ಶಾಹಿ, ಪು.೬೪

೬೫. ಬೆಳಗಾವಿ ಬೆಳಕು, ಪು.೬೦

೬೬. ಕರ್ನಾಟಕ ಪರ್ಶಿಯನ್ ಅರೆಬಿಕ್ ಮತ್ತು ಉರ್ದು ಶಾಸನಗಳು, ಪು.೧೬-೧೭

೬೭. ಬೆಳಗಾವಿ ಕಾ ಆಯನಾಮೆ, ಪು.೩೭

೬೮. ಬುಸಾತೀನ ಸಲಾತಿನ, ಪು.೫೫

೬೯. ಬೆಳಗಾವಿ ಜಿಲ್ಲೆ ಭವ್ಯ ಪರಂಪರೆ, ಪೂರ್ವೋಕ್ತ, ಪು.೭೪

೭೦. ಬಿಜಾಪುರದ ಆದಿಲ್‌ಶಾಹಿ, ಪು.೧೦೬-೧೦೭

೭೧. ಕರ್ನಾಟಕ ಪರ್ಶಿಯನ್ ಅರೆಬಿಕ್ ಮತ್ತು ಉರ್ದು ಶಾಸನಗಳು, ಪು.೧೮

೭೨. ಬೆಳಗಾವಿ ಜಿಲ್ಲೆ ಭವ್ಯ ಪರಂಪರೆ, ಪೂರ್ವೋಕ್ತ, ಪು.೭೬

೭೩. ಅದೇ, ಪು.೭೬

೭೪. ಬೆಳಗಾವಿ ಜಿಲ್ಲೆ ಭವ್ಯ ಪರಂಪರೆ, ಪು.೨೦

೭೫. ಅದೇ ಪುಸ್ತಕ, ಪು.೮೦

೭೬. ಬೆಳಗಾವಿ ಕಾ ಆಯನಾಮೆ, ಪು.೩೮

೭೭. ಸವಣೂರ ನವಾಬರು, ಪು.೨೨

೭೮. ಬೆಳಗಾವಿ ಕಾ ಆಯನಾಮೆ, ಪು.೩೮

## ಅಧ್ಯಾಯ ಮೂರು

# ಧಾರ್ಮಿಕ ಮತ್ತು ಧಾರ್ಮಿಕೇತರ ಸ್ಮಾರಕಗಳು

ವಾಸ್ತುಶಿಲ್ಪ ಕಲೆಯ ಐತಿಹಾಸಿಕ ಅಧ್ಯಯನಕ್ಕೆ ದೊರಕುವ ವಿಶಿಷ್ಟವಾದ ಸಾಮಗ್ರಿಗಳೆಂದರೆ ದೇವಾಲಯಗಳು, ಮಸೀದಿ, ಚರ್ಚ, ಬಸದಿ ಹಾಗೂ ಗೋರಿ ಇತ್ಯಾದಿ. ವಾಸದ ಮನೆಗಳಿಗಿಂತ ಹೆಚ್ಚು ಕಾಲ ಉಳಿವಂತಹ ರೀತಿಯಲ್ಲಿ ಇವುಗಳನ್ನು ಕಟ್ಟಿ ಉಳಿಸಿಕೊಂಡು ಬಂದರು. ಅಂದರೆ ವಾಸ್ತುಶಿಲ್ಪ ಪ್ರಧಾನವಾಗಿ ಉಳಿದು ಬೆಳೆದು ಬಂದಿದು ಧಾರ್ಮಿಕ ತಳಹದಿಯ ಮೇಲೆನ್ನಬಹುದು. ಇದರ ಜೊತೆಗೆ ಕೆಲವು ಭೌಗೋಳಿಕ ಸನ್ನಿವೇಶಗಳು ಸಾಮಾಜಿಕ ಮತ್ತು ರಾಜಕೀಯ ಪರಿವರ್ತನೆಗಳು, ಐತಿಹಾಸಿಕ ಘಟನೆಗಳು, ವಾಸ್ತುಶಿಲ್ಪವನ್ನು ಪ್ರಭಾವಿಸಿವೆ. ಇವುಗಳ ಪ್ರಭಾವದಿಂದ ಬದಲಾವಣೆಗೊಂಡ ಅಭಿರುಚಿಗೆ ತಕ್ಕಂತೆ ವಾಸ್ತುಶಿಲ್ಪ ಬೆಳೆದು ಬಂದಿತು. ವಾಸ್ತುಶಿಲ್ಪದ ಚರಿತ್ರೆಯೆಂದರೆ ಒಂದು ಜನಾಂಗದ ಅಭಿರುಚಿಯ ಚರಿತ್ರೆ. ಇಲ್ಲಿ ಕಾಲಕಾಲಕ್ಕೆ ಆದ ಧಾರ್ಮಿಕ, ಸಾಮಾಜಿಕ, ರಾಜಕೀಯ ಬದಲಾವಣೆಗೆ ಅನುಗುಣವಾಗಿ ವಾಸ್ತುಶಿಲ್ಪ ಬೆಳೆದು ಬಂದಿದೆ. ಅದರ ಅಭಿವ್ಯಕ್ತಿ ಸ್ವರೂಪ ಕಾಲಕಾಲಕ್ಕೆ ಬದಲಾಗುತ್ತ ಬಂದಿದೆ. ಇದಕ್ಕೆ ಅನುಸಾರವಾಗಿ ಬೆಳಗಾವಿ ನಗರದಲ್ಲಿ ವೈವಿಧ್ಯಮಯವಾದ ವಾಸ್ತುಶಿಲ್ಪ ಬೆಳೆದು ಬಂದಿದೆ.

ಪ್ರಾಚೀನ ಕಾಲದಿಂದಲೂ ಮಾನವನ ಚಟುವಟಿಕೆಯ ನೆಲೆಬೀಡಾಗಿದ್ದ ಬೆಳಗಾವಿ ಪ್ರದೇಶದಲ್ಲಿ ಹಲವು ಅರಸುಮನೆತನಗಳು ಆಳ್ವಿಕೆ ನಡೆಸಿವೆ. ಪ್ರಮುಖವಾಗಿ ಶಾತವಾಹನರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ರಟ್ಟರು, ದೇವಗಿರಿ ಯಾದವರು, ಬಹುಮನಿಗಳು, ಆದಿಲ್‌ಶಾಹಿಗಳು, ಮೊಘಲರು, ಸವಣೂರ ನವಾಬರು ಬೆಳಗಾವಿಯನ್ನು ತಮ್ಮ ಆಡಳಿತದ ಭಾಗವಾಗಿ ಮಾಡಿಕೊಂಡು ಹಲವಾರು ಸ್ಮಾರಕಗಳನ್ನು ನಿರ್ಮಿಸಿದ್ದಾರೆ. ಕ್ರಿ.ಶ.೧೩ನೇ ಶತಮಾನದಿಂದ ೧೭ನೇ ಶತಮಾನದವರೆಗೆ ಮುಸ್ಲಿಂ ಆಡಳಿತಗಾರರ ಅವಧಿಯಲ್ಲಿ ನಿರ್ಮಾಣವಾದಂತಹ ಕೋಟೆ, ಕಛೇರಿ, ಮಹಲ್, ಮತ್ತು ಮಸೀದಿ, ದರ್ಗಾಗಳಂತಹ ಸ್ಮಾರಕಗಳ

ರಚನಾ ಶೈಲಿ, ಬಾಹ್ಯರೂಪ ಅಲಂಕಾರ ವಿನ್ಯಾಸ ಗಮನಾರ್ಹವಾಗಿದ್ದು ಬೆಳಗಾವಿಯ ಪ್ರಾದೇಶಿಕ ವಾಸ್ತುಶಿಲ್ಪಕಲೆಯನ್ನು ಶ್ರೀಮಂತಗೊಳಿಸಿವೆ. ಈ ಕಾಲಘಟ್ಟದಲ್ಲಿ ನಿರ್ಮಾಣವಾದಂತಹ ಮುಸ್ಲಿಂ ಸ್ಮಾರಕಗಳ ಕುರಿತು ಪ್ರಸ್ತುತ ಅಧ್ಯಾಯದಲ್ಲಿ ಸ್ಥೂಲವಾಗಿ ವಿವರಿಸಲಾಗಿದೆ. ಇಲ್ಲಿ ನಿರ್ಮಿಸಿದಂತಹ ಕೋಟೆ–ಕೊತ್ತಲುಗಳು ಮತ್ತು ಬುರುಜಗಳನ್ನು ಸಂರಕ್ಷಣಾ ರೂಪದಲ್ಲಿ ಕಟ್ಟಲಾಗಿದೆ. ಉಪನಗರ ಮತ್ತು ನೀರಿನ ಸರಬರಾಜು ವ್ಯವಸ್ಥೆಗೆ ಕಟ್ಟಡಗಳನ್ನು ಉಪಜೀವನಕ್ಕಾಗಿ ನಿರ್ಮಿಸಿಕೊಳ್ಳಲಾಗಿದೆ. ಧಾರ್ಮಿಕ ಕಾರ್ಯಗಳಿಗಾಗಿ ಮಸೀದಿಗಳನ್ನು ಹಾಗೂ ವಾಸಸ್ಥಾನಕ್ಕಾಗಿ ಅರಮನೆ, ಮಹಲ್‌ಗಳನ್ನು ಮತ್ತು ನ್ಯಾಯ ಮಂದಿರ ನಿರ್ಮಿಸಲಾಗಿದೆ. ಸ್ವತಹ ನೆನೆಪಿಗಾಗಿ ಕಟ್ಟಡ ಸಮಾಧಿ ಮತ್ತು ಗೋರಿಗಳನ್ನು ನಿರ್ಮಿಸಿದನ್ನು ಕಾಣಬಹುದು.[೧] ಈ ಸ್ಮಾರಕಗಳನ್ನು ಅಧ್ಯಯನ ದೃಷ್ಟಿಯಿಂದ ಧಾರ್ಮಿಕ ಮತ್ತು ಧಾರ್ಮಿಕೇತರ ಸ್ಮಾರಕಗಳೆಂದು ಎರಡು ಭಾಗಗಳಲ್ಲಿ ಕ್ರೂಡಿಕರಿಸಿ ಅಧ್ಯಯನ ಕೈಗೊಳ್ಳಲಾಗಿದೆ.

ಈ ಸ್ಮಾರಕಗಳನ್ನು ಆಡಳಿತಗಾರರು ತಮ್ಮ ಅವಶ್ಯಕತೆ ಅನುಸಾರವಾಗಿ ರಚಿಸಿದ್ದಾರೆ. ಸ್ಮಾರಕಗಳು ಹೆಚ್ಚಾಗಿ ದಖ್ಖನ್, ಆದಿಲ್‌ಶಾಹಿ ಮತ್ತು ಇಂಡೋ–ಸಾರ್ಸನಿಕ್ ವಾಸ್ತು ಶೈಲಿಯನ್ನು ಅಳವಡಿಸಿ ನಿರ್ಮಿಸಲಾಗಿದೆ. ಈ ದಖ್ಖನ ಶೈಲಿಯು ಮೂಲತಹ ತುಘಲಕ್ ಶೈಲಿಯಿಂದ ಪ್ರಭಾವಿತಗೊಂಡಿದೆ. ವಿಜಾಪುರ ಆಡಳಿತಗಾರರು ಈ ಭಾಗದಲ್ಲಿ ಆಳ್ವಿಕೆ ಮಾಡಿದ ಕಾರಣ ಹೆಚ್ಚಿನ ಸಂಖ್ಯೆಯ ಸ್ಮಾರಕಗಳು ಆದಿಲ್‌ಶಾಹಿ ವಾಸ್ತುಶೈಲಿ ಹಾಗೂ ಇಂಡೋ–ಸಾರ್ಸೆನಿಕ್ ವಾಸ್ತುಶೈಲಿನ್ನು ಬಳಸಿ ಸ್ಮಾರಕಗಳನ್ನು ರಚಿಸಲಾಗಿದೆ. ವಿಜಾಪುರ ಆದಿಲ್‌ಶಾಹಿಗಳ ಕಟ್ಟಡ ವಾಸ್ತುಶೈಲಿ ಲಕ್ಷಣಗಳು ಅಟೋಮನ್ ಮತ್ತು ಪರ್ಶಿಯನ್ ವಾಸ್ತುಶಿಲ್ಪಿಗಳ ಸಂಪರ್ಕದ ಪ್ರಭಾವದಿಂದ ಈ ಸ್ಮಾರಕಗಳು ಕಂಗೋಳಿಸುವಂತಾಗಿವೆ. ಗುಮ್ಮಟವು ಸಾಮಾನ್ಯವಾಗಿ ವರ್ತುಲಕಾರ ವಾಗಿದ್ದು ಭೂ ಮಟ್ಟದಿಂದ ಹೂವಿನ ದಳಗಳೋಪಾದಿಯ ಸಮೂಹದಿಂದ ಕ್ರಮೇಣ ಕಟ್ಟಡ ಮೇಲುರುತ್ತದೆ. ಕಟ್ಟಡದ ಮೇಲ್ಭಾಗವು ಚಿಕ್ಕ ಗುಮ್ಮಟಗಳಿಂದ ಅಲಂಕೃತವಾಗಿರುತ್ತವೆ. ಕಮಾನುಗಳು ಅದರ ಹಿಂದಿನ ಗೆರೆಗಳ ಕೋನದ ಮುಖಾಂತರ ನಯವಾಗಿ ಭಾಗಿರುತ್ತವೆ. ಕೆಲವು ಕಮಾನುಗಳು ಚತುಷ್ಕೇಂದ್ರದಿಂದ ಕೂಡಿವೆ. ವಿಜಾಪುರ ವಾಸ್ತುಶಿಲ್ಪಗಳಲ್ಲಿ ಕಂಬಗಳಿರುವುದಿಲ್ಲ. ಕಂಬದ ಬದಲಾಗಿ ಆಯತಕಾರದ ಛೇದ ವಿನ್ಯಾಸದ ದಪ್ಪ ಗೋಡೆಗಳಿರುತ್ತವೆ. ಗೋಡೆಯ ಚಾಚುಭಾಗ (ಕಪೋತ) ಕಟ್ಟಡಗಳಿಗೆ ಅಲಂಕರಣ ರೂಪದಲ್ಲಿ ಎಲ್ಲಡೆಯು ಕಂಡು ಬರುತ್ತವೆ.[೨]

ಇನ್ನೂ ಕೆಲವು ಸ್ಮಾರಕಗಳನ್ನು ಇಂಡೋ ಸಾರ್ಸೆನಿಕ ವಾಸ್ತುಶೈಲಿಯಲ್ಲಿ, ಕೆತ್ತಿದ ಕಲ್ಲು ಮತ್ತು ಗಚ್ಚುಗಳಿಂದ ಗೋಡೆಗಳನ್ನು ಕಟ್ಟುವ ಕ್ರಮ ಬೆಳೆಯಿತು. ಇವುಗಳಲ್ಲಿ ಸುಣ್ಣದ ಗಾರೆಗಳನ್ನು ಬಳಿಸಿದರು. ಮೊಣಚಾದ ಕಮಾನಗಳನ್ನು ಗೋಡೆಗಳ ಮೂಲೆ ಮುರಿದು ಬಾಗಿಸಿ ಅವುಗಳ

ಮೇಲೆ ಗೋಲಾಕಾರದ ಕಂಬಗಳನ್ನು ತುಂಡು ಕಲ್ಲು ಮತ್ತು ಗಚ್ಚುಗಳಿಂದ ಕೂಡಿ ಕಟ್ಟುವ ಹೊಸ ಕ್ರಮ ಬೆಳೆದು ಬಂದಿತು. ವಿಸ್ತಾರವಾದ ಚೌಕ ತಳದ ಮೇಲೆ ಗೋಡೆ ಮತ್ತು ಕಮಾನುಗಳು, ಕಟ್ಟಡದ ಮೇಲ್ಗಡೆ ಮುಚ್ಚಿಗೆ ಗೋಪುರಗಳ ಬದಲು ಪುಳ್ಳಾದ ಗುಮ್ಮಟಗಳ ನಿರ್ಮಾಣ. ಇಂತಹ ವಾಸ್ತು ರಚನೆಯಲ್ಲಿ ಗಾರೆಯ ಹೊದಿಕೆ ಪ್ರಮುಖವಾಗಿರುತ್ತದೆ.[೩] ಈ ಮೇಲಿನ ಲಕ್ಷಣಗಳನ್ನು ಅನುಸರಿಸಿ ಮುಸ್ಲಿಂ ಆಡಳಿತಗಾರರು ಈ ಸ್ಮಾರಕಗಳನ್ನು ನಿರ್ಮಿಸಿದ್ದಾರೆ. ಈ ಸ್ಮಾರಕಗಳು ಅವರ ಆಳ್ವಿಕೆಯ ಪ್ರತಿರೂಪವಾಗಿ ಇಂದಿಗೂ ಉಳಿದು ಬಂದಿರುವುದು ಅದೃಷ್ಟಕರ. ಅವುಗಳಲ್ಲಿ ಕೆಲವು ಸ್ಮಾರಕಗಳು ವಿನಾಶದ ಅಂಚಿನಲ್ಲಿವೆ.

### ಧಾರ್ಮಿಕ ಸ್ಮಾರಕಗಳು

ಮುಸ್ಲಿಂ ಆಡಳಿತಗಾರರು ಬೆಳಗಾವಿಯನ್ನು ಸುಮಾರು ಐದು ಶತಮಾನಗಳ ಕಾಲ ಆಳ್ವಿಕೆ ಮಾಡಿ ನೂರಾರು ಸ್ಮಾರಕಗಳನ್ನು ಧಾರ್ಮಿಕ ಉದ್ದೇಶಗಳಿಗುಣವಾಗಿ ನಿರ್ಮಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾಗಿ ಪ್ರಾರ್ಥನಾ ಮಂದಿರ(ಮಸೀದಿ) ದರ್ಗಾಗಳನ್ನು ಹೆಚ್ಚಾಗಿ ನಿರ್ಮಿಸಿದ್ದನ್ನು ಇಲ್ಲಿ ಕಾಣಬಹುದು. ಪ್ರಾರ್ಥನಾ ಮಂದಿರಗಳು ಮುಸ್ಲಿಂ ಜನಾಂಗದ ಐಕ್ಯತೆಯ ಕೇಂದ್ರವಾಗಿ ಹಾಗು ಧರ್ಮ ಪ್ರಚಾರಕ್ಕಾಗಿ ಈ ಸ್ಮಾರಕಗಳನ್ನು ನಿರ್ಮಿಸಿರುವರು. ಶ್ರೇಷ್ಠ ಸೂಫಿ ಸಂತರ ಆರಾಧನೆಗೊಸ್ಕರ ದರ್ಗಾಗಳನ್ನು ನಿರ್ಮಿಸಲಾಗಿದೆ. ಧಾರ್ಮಿಕ ಆಚರಣೆಗಳಿಗೊಸ್ಕರ ಆಶ್ರುಖಾನ, ಈದ್ಗಾ ಸ್ಮಾರಕಗಳನ್ನು ನಿರ್ಮಿಸಿದರು. ಈ ಸ್ಮಾರಕಗಳು ಧಾರ್ಮಿಕ ಆರಾಧನಾ ಕೇಂದ್ರಗಳಾಗಿ ಮಾರ್ಪಟ್ಟಿವೆ. ಇಂಥಹ ನೂರಾರು ಸ್ಮಾರಕಗಳು ಬೆಳಗಾವಿ ನಗರದಲ್ಲಿ ವಿವಿಧ ವಾಸ್ತುಶೈಲಿಗಳನ್ನು ಬಳಸಿ ನಿರ್ಮಿಸಲಾಗಿದೆ.

ಬೆಳಗಾವಿಗೆ ಮುಸ್ಲಿಂಧರ್ಮ ಕಾಲಿಟ್ಟಿದ್ದು ಮೊದಲು ಅರಬ್ ಸಿದ್ಧಿ ಹಾಗೂ ಪರ್ಶಿಯನ್ ವ್ಯಾಪಾರಿಗಳಿಂದ. ಮಹಮ್ಮದ ಬಿನ್ ತುಘಲಕ್‌ನು ದಕ್ಷಿಣ ಭಾರತದ ಮೇಲೆ ೧೪ನೇ ಶತಮಾನದ ಪೂರ್ವಾರ್ಧದಲ್ಲಿ ನಡೆಸಿದ ದಾಳಿಯಿಂದ ಸಾವಿರಾರು ಸಂತರು ದಕ್ಷಿಣ ಭಾರತಕ್ಕೆ ಬಂದರು. ಅವರಲ್ಲಿ  ಕೆಲವು ಸಂತರು ಬೆಳಗಾವಿ ನಗರಕ್ಕೆ ಬಂದು ನೆಲೆಸಿದರು. ಹಲವು ಸಂತರು ಧರ್ಮ ಪ್ರಚಾರ ಕಾರ್ಯ ಕೈಗೊಳ್ಳುತ್ತಾ ಇಲ್ಲಿಯೆ ಮರಣ ಹೊಂದಿದರು. ಈ ಸಂತರ ಆರಾಧನೆಗಾಗಿ ಇವರ ಅನುಯಾಯಿಗಳು ದರ್ಗಾಗಳನ್ನು ನಿರ್ಮಿಸಿ ಸಂತರ ಆಚಾರ ವಿಚಾರ ಆದರ್ಶಮಯ ಜೀವನವನ್ನು ಮಾದರಿಯಾಗಿ  ಇಂದಿಗೂ ಪಾಲಿಸುತ್ತಿದ್ದಾರೆ.

### ದರ್ಗಾಗಳು

ಸೂಫಿ ಪಂಥವು ಇಸ್ಲಾಂ ಧರ್ಮದಷ್ಟೆ ಪ್ರಾಚೀನವಾದುದು. ಸೂಫಿಗಳು ಆದರ್ಶಮಯವಾದ ಜೀವನವನ್ನು ನಡೆಸಿ ಸಮಾಜದಲ್ಲಿ ಶಾಂತಿ ಮತ್ತು ಸ್ಥಿರತೆ ಕಾಪಾಡಿಕೊಂಡು ಭಕ್ತಿಯ

ಮೂಲಕ ದೇವರೊಂದಿಗೆ ಐಕ್ಯತೆ ಸಾಧಿಸುತ್ತಾರೆ. ಪ್ರತಿಯೊಬ್ಬ ಸೂಫಿಯು ಮುಖರಬ್ಬ(ದೇವರ ಗೆಳೆಯ ಸ್ಥಾನವನ್ನು ಗಳಿಸಲು ಪ್ರಯತ್ನಿಸುತ್ತಾರೆ. ದೇವರೆದುರು ಎಲ್ಲರೂ ಸಮಾನರು ಪರಸ್ಪರಲ್ಲಿ ಭ್ರಾತತ್ವದ ಭಾವನೆಗಳನ್ನು ಬೆಳೆಸುವ ಧ್ಯೇಯವಾಗಿರಿಸಿಕೊಂಡಿರುತ್ತಾರೆ. ಇಂತಹ ಸಂದೇಶವನ್ನು ನೀಡಿ ತಮ್ಮ ಆಧ್ಯಾತ್ಮಿಕ ವಿಚಾರಧಾರೆಗಳಿಂದ ಜನರ ಮೇಲೆ ಪ್ರಭಾವ ಭೀರಿ ಇಂದಿಗೂ ಜನರ ಮನದಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದ್ದಾರೆ.

ಬೆಳಗಾವಿ ನಗರಕ್ಕೆ ೧೩ನೇ ಶತಮಾನದ ಮೊದಲ ಭಾಗದಲ್ಲಿ ಸೂಫಿ ಸಂತರು ಬರಲು ಪ್ರಾರಂಭಿಸಿದರು. ಅವರಲ್ಲಿ ಕೆಲವರು ಚಿಸ್ತಿ ಸಂಪ್ರದಾಯದವರು ಸೂಹಾವರ್ದಿ ಸಂಪ್ರದಾಯ ಮತ್ತು ಖಾದ್ರಿ ಸಂಪ್ರದಾಯ, ನಕ್ಷಾಬಂಧೀ ಪಂಥದ ಸೂಫಿಗಳು ಬೆಳಗಾವಿಗೆ ಬಂದು ನೆಲಸಿ ತಮ್ಮ ಆಧ್ಯಾತ್ಮಿಕ ವಿಚಾರ ಧಾರೆಗಳಿಂದ ಸುಸಂಸ್ಕೃತವಾದ ಸಮಾಜದ ನಿರ್ಮಾಣಕ್ಕೆ ಕಾರಣರಾಗಿದ್ದಾರೆ. ಇವರು ಯಾವುದೇ ಜಾತಿ ಮತ ಪಂಥ ಬೇಧ ಮರೆತು ಶಾಂತಿ, ಸಾಮರಸ್ಯ, ವಿಶ್ವಭ್ರಾತೃತ್ವ, ಸೌಹಾರ್ದಯುತ ಸಹಬಾಳ್ವೆಯ ಸಂದೇಶವನ್ನು ನೀಡುತ್ತಾ ಸಮಾಜವನ್ನು ಶುದ್ಧಿಕರಿಸಲು ಪ್ರಯತ್ನಿಸಿದರು. ಭಕ್ತಿಯ ಮೂಲಕ ಆರಾಧನೆ ಮಾಡಬೇಕು ಎಂಬ ಸಂದೇಶವನ್ನು ನೀಡಿದರು. ಬೆಳಗಾವಿಯಲ್ಲಿ ಕೆಲವು ದರ್ಗಾಗಳು ಶ್ರೇಷ್ಠ ಸೂಫಿ ಸಂತರಾದ ಖ್ವಾಜೆ ಬಂದೇ ನವಾಜರ ಹಾಗೂ ಸಲೀಮ್ ಚಿಸ್ತಿಯವರ ಪ್ರಭಾವದಿಂದ ಸಂತ ದೀಕ್ಷೆ ಪಡೆದ ಸಂತರ ದರ್ಗಾಗಳು ಬೆಳಗಾವಿಯಲ್ಲಿವೆ. ಇವರು ತಮ್ಮ ಗುರುಗಳ ಸಂದೇಶ ಅಚಾರ ವಿಚಾರಗಳನ್ನು ಮುಂದವರಿಸಿಕೊಂಡು ಧರ್ಮ ಪ್ರಚಾರ ಮಾಡುತ್ತಾ ಸಮಾಜದ ಶುದ್ಧೀಕರಣಕ್ಕಾಗಿ ಶ್ರಮಿಸಿದರು.

ಇನ್ನೂ ಕೆಲವು ದರ್ಗಾಗಳು ಸುಲ್ತಾನರು ತಮ್ಮ ಆಡಳಿತದಲ್ಲಿ ಸಂತರನ್ನು ನೇಮಿಸಿಕೊಂಡು ಅವರ ಮಾರ್ಗದರ್ಶನದಲ್ಲಿ ಜನ ಸಾಮಾನ್ಯರ ಹಿತಕ್ಕಾಗಿ ಶ್ರಮಿಸಿದರು. ಇಂತಹ ಆಡಳಿತಗಾರರ ದರ್ಗಾಗಳು ಇಲ್ಲಿ ಕಂಡುಬರುತ್ತವೆ. ಈ ಆಡಳಿತಗಾರರ ಸೇವೆಯ ಪ್ರತಿರೂಪವಾಗಿ ಜನಸಾಮಾನ್ಯರು ಅವರ ಆದರ್ಶಮಯವಾದ ಜೀವನ ಮುಂದಿನ ಪೀಳಿಗೆಗೆ ಮಾದರಿಯಾಗಲಿ ಎನ್ನುವ ದೃಷ್ಟಿಯಿಂದ ಅವರನ್ನು ದೈವಿ ರೂಪದಲ್ಲಿ ಇಂದಿಗೂ ಆರಾಧನೆ ಮಾಡಲಾಗುತ್ತಿದೆ.

ದರ್ಗಾಗಳು ಸಾಮಾನ್ಯವಾಗಿ ಒಬ್ಬ ಶ್ರೇಷ್ಠ ಸೂಫಿ ಪೀರ, ಷಯ್ಖ ಸಂತರ ಸಮಾಧಿಗಳಾಗಿರುತ್ತವೆ. ಯಾವುದೇ ಒಬ್ಬ ಸೂಫಿ ಸಂತ ಮರಣ ಹೊಂದಿದ ನಂತರ ಅವರ ಅನುಯಾಯಿಗಳು ಹಾಗೂ ಸುಲ್ತಾನರು ಸಮಾಧಿಯನ್ನು ರಕ್ಷಣಾ ರೂಪದಲ್ಲಿ ಶಾಸ್ತ್ರಬದ್ಧವಾದ ವಾಸ್ತುಶೈಲಿಯನ್ನು ಬಳಸಿ ಕಟ್ಟಡವನ್ನು ನಿರ್ಮಿಸಲಾಗುತ್ತದೆ. ಇದನ್ನು ನಂತರ ಕಾಲದಲ್ಲಿ ದರ್ಗಾಗಳೆಂದು ಕರೆಯಲು ಪ್ರಾರಂಭಿಸಿದರು. ದರ್ಗಾಗಳನ್ನು ಸಾಮಾನ್ಯವಾಗಿ ವಿಶಾಲವಾದ ಬಯಲು ಪ್ರದೇಶದ ಒಳಗೆ ವಿಸ್ತಾರವಾದ ಚೌಕ ತಳದ ಮೇಲೆ ಚತುರ್ಮುಖವಾಗಿ ಗೋಡೆಯನ್ನು

ನಿರ್ಮಿಸಲಾಗುತ್ತದೆ. ಗೋಡೆಯ ಭಾಗದಲ್ಲಿ ಕಮಾನಿನಾಕಾರದ(ದ್ವಾರ) ಬಾಗಿಲನ್ನು ಮತ್ತು ಬೆಳಕಿಗಾಗಿ ಚಿಕ್ಕ ಜಾಲಂಧ್ರಗಳನ್ನು ಹಾಗೂ ಕಟ್ಟಡದ ಮಧ್ಯ ಗರ್ಭಾಂಕಣದ ಮೇಲೆ ಸುಂದರವಾದ ವರ್ತುಳ ಗುಮ್ಮಟ ನಿರ್ಮಾಣ ಮಾಡಲಾಗಿರುತ್ತದೆ. ಸಮಾಧಿಯ ಸುತ್ತಲೂ ಮತ್ತು ಬದಿಗೆ ಕಂಬಗಳಿಂದ ಕೂಡಿರುತ್ತವೆ. ಪಕ್ಕದಲ್ಲಿ ಪ್ರಾರ್ಥನೆಗೆ ಸ್ಥಳವಕಾಶ ಇರುತ್ತದೆ. ಗುಮ್ಮಟದ ಕೆಳಗಡೆ ಕೇಂದ್ರ ಭಾಗದಲ್ಲಿ ಸಮಾಧಿಗೆ ಮೀಸಲಾಗಿರುತ್ತದೆ. ಸಮಾಧಿಯ ಬಳಿಯಲ್ಲಿ ಪ್ರತ್ಯೇಕವಾದ ಮಸೀದಿ ಇರುತ್ತದೆ. ದರ್ಗಾ ಮತ್ತು ಮಸೀದಿ ಒಂದೇ ಆವರಣದಲ್ಲಿದ್ದರೆ ಅದನ್ನು "ರೋಜ" ಎಂದು ಕರೆಯಲಾಗುತ್ತದೆ.[೪] ಇಂತಹ ಸಂತರ ಹಾಗೂ ಆಡಳಿತಗಾರರ ದರ್ಗಾಗಳು ಬೆಳಗಾವಿ ನಗರದಲ್ಲಿ ಸಾಕಷ್ಟಿವೆ. ಅವುಗಳಲ್ಲಿ ಪ್ರಮುಖವಾದ ಕೆಲವು ದರ್ಗಾಗಳ ಕುರಿತು ಸಂಕ್ಷಿಪ್ತವಾಗಿ ವಿವರಿಲಾಗಿದೆ.

### ಹಜರತ ಸಯ್ಯುದ್ಧಿನ ಶಹಾ ಬದ್ರುದ್ದೀನ ಚಿಸ್ತಿ ದರ್ಗಾ

ಇವರ ದರ್ಗಾವು ಬೆಳಗಾವಿ ನಗರದ ಮುಖ್ಯ ಕೋಟೆ ಒಳ ಆವರಣದಲ್ಲಿದೆ. ಹಜರತ್ ಸಯ್ಯದ್ಧಿನ ಶಹಾ ಬದ್ರುಧ್ಧೀನ ಚಿಸ್ತಿಯವರ ಪೂರ್ಣ ಹೆಸರು ಖ್ವಾಜಾ ಮೊಹಿನುದ್ದೀನ ಹಸನ ಸಂಜುರ ಅಜ್ಮಿರ (ಮೊಯತಾಬ) ಬದ್ರುದ್ದೀನ ಚಿಸ್ತಿಯವರ ಹಿಜರಿ ಶಕೆ ಪ್ರಕಾರ ೫೮೯-೬೩೩(ಕ್ರಿ.ಶ.೧೩೪೬-೧೪೨೦)ರಲ್ಲಿ ಜೀವಿಸಿದ್ದರು. ಇವರು ಮೂಲತಹ ಇರಾನ ಭಾಗವಾದ ಮೊಯತಾಬ್‌ನಲ್ಲಿ ಜನಸಿದರು. ಇರಾನಿಂದ ಪಾಕಿಸ್ತಾನದ ಮೂಲಕವಾಗಿ ಭಾರತದ ದೆಹಲಿಗೆ ಬಂದರು. ದೆಹಲಿಯಲ್ಲಿದ್ದ ಖ್ವಾಜಾ ಹಜರತ್ ಮೈನುದ್ದೀನ ಚಿಸ್ತಿಯವರ ಮಾರ್ಗದರ್ಶನದಲ್ಲಿ ಅಧ್ಯಾತ್ಮಿಕ ಜ್ಞಾನ ಪಡೆದ ಶ್ರೇಷ್ಠ ಸಂತರೆನಿಸಿದರು. ಚಿಸ್ತಿಯವರ ಆಪ್ತ ಶಿಷ್ಯರಲ್ಲಿ ಒಬ್ಬರಾಗಿದ್ದರು. ನವಾಬರ ಆಜ್ಞೆಯ ಮೇರೆಗೆ ದಕ್ಷಿಣ ಭಾರತಕ್ಕೆ ಧರ್ಮ ಪ್ರಚಾರ ಕಾರ್ಯ ನಿಮಿತ್ತ ಪೂನಾ ಮಾರ್ಗವಾಗಿ ಬೆಳಗಾವಿ ನಗರಕ್ಕೆ ಬಂದು ನೆಲಸಿದರು. ಬದ್ರುಧ್ಧೀನ ಚಿಸ್ತಿಯವರು ಬೆಳಗಾವಿಗೆ ಬಂದ ಮೊದಲ ಸಂತರಾಗಿದ್ದಾರೆ. ಬೆಳಗಾವಿಯಲ್ಲಿಯೇ ನೆಲಸಿ ತಮ್ಮ ಆಧ್ಯಾತ್ಮಿಕ ವಿಚಾರಧಾರೆ ಗಳಿಂದ ಸಮಾಜದ ಎಲ್ಲ ವರ್ಗದ ಜನಾಂಗದವರಲ್ಲಿ ಬೆರತು ಸಮಾಜದಲ್ಲಿರುವ ಮೂಢನಂಬಿಕೆ, ಕಂದಾಚಾರಗಳನ್ನು ಶುದ್ಧೀಕರಿಸಿ ಸಮಾಜದಲ್ಲಿ ಶಾಂತಿ, ಸಹಬಾಳ್ವೆ ಜೀವನವನ್ನು ನಡೆಸಿ ಮಾದರಿಯಾದರು. ಜನರು ಇವರನ್ನು ಪ್ರೀತಿಯಿಂದ (ಆರೀಫ್) ಎಂಬ ಬಿರುದನ್ನು ನೀಡಿ ಅದೇ ಹೆಸರಿನಿಂದಲೇ ಕರೆಯುತ್ತಿದ್ದರು.

ಇಂದಿಗೂ ಇವರ ದರ್ಗಾಕ್ಕೆ ಇಸ್ಲಾಂ ಮತ್ತು ಇಸ್ಲಾಂತೇರ ಜನಾಂಗದವರು ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಧರ್ಮ ಪ್ರಚಾರ ಕಾರ್ಯವನ್ನು ಕೈಗೊಳ್ಳುತ್ತಾ ಹಿಜರಿ ಶಕೆ ಪ್ರಕಾರ ೬೩೩ ರಜಬ್ ೧೦ ರಂದು ಕ್ರಿ.ಶ. ೧೪೨೦ ರಲ್ಲಿ ಮರಣ ಹೊಂದಿದರು. ಕೋಟೆ ಒಳಆವರಣದಲ್ಲಿ

ಇವರ ಸಮಾಧಿಯನ್ನು ಮಾಡಲಾಯಿತು. ಮುಂದೆ ಆ ಸಮಾಧಿಯ ರಕ್ಷಣೆಗಾಗಿ ಆದಿಲ್‌ಶಾಹಿಗಳ ಗವರ್ನನಾಗಿದ್ದ ಅಸದ್‌ಖಾನನು ಈ ದರ್ಗಾವನ್ನು ನಿರ್ಮಿಸಿದನು.೫ ಅಸದ್‌ಖಾನ ಈ ದರ್ಗಾಕ್ಕೆ ದಿನಂಪ್ರತಿ ಪ್ರಾರ್ಥನೆಗೋಸ್ಕರ ಭೇಟಿ ನೀಡುತ್ತಿದ್ದನು ಎನ್ನಲಾದ ಆ ಸ್ಥಳವನ್ನು ಕಾಯ್ದಿರಸಲಾಗಿದೆ. ಈ ದರ್ಗಾದ ಆವರಣದಲ್ಲಿ ಇವರ ಜೊತೆ ಬಂದಂತಹ ಶಿಷ್ಯರ ಮತ್ತು ಅನುಯಾಯಿಗಳ ಸಮಾಧಿಗಳಿವೆ. ಔರಂಗಜೇಬನ ಸ್ವಹಸ್ತದಿಂದ ಬರೆದಂತಹ ಕುರ್-ಆನ್ ಹಸ್ತಪ್ರತಿಯು ಈ ದರ್ಗಾದ ಮುಜಾವರ ಬಳಿಯಲ್ಲಿ ಕಾಣಬಹುದು.

ದರ್ಗಾವು ಆದಿಲ್‌ಶಾಹಿ ಆಡಳಿತಗಾರರಿಂದ ಪ್ರೋತ್ಸಾಹ ಪಡೆದುಕೊಂಡು ವಿಜಾಪುರ ವಾಸ್ತುಶೈಲಿಯಲ್ಲಿ ನಿರ್ಮಿಸಲಾಗಿದೆ. ದರ್ಗಾವನ್ನು ಕೋಟೆಯ ವಿಶಾಲ ಒಳಆವರಣದಲ್ಲಿ ಚಿಕ್ಕ ಜಗತಿಯ ಮೇಲೆ ಚೌಕಾಕಾರ ರೂಪದಲ್ಲಿ ನಿರ್ಮಿಸಲಾಗಿದೆ. ದರ್ಗಾದ ಸುತ್ತಲೂ ಹೊರ ಪ್ರದಕ್ಷಿಣಾ ಪಥಕ್ಕೆ ಸ್ಥಳವಕಾಶ ಕಲ್ಪಸಲಾಗಿದೆ. ದರ್ಗಾದ ಗೋಡೆಯು ೧೨ ಅಡಿ ಅಗಲವಾಗಿದ್ದು ೧೮ ಅಡಿ ಎತ್ತರವಾಗಿದೆ. ಈ ಗೋಡೆಯ ದಕ್ಷಿಣ ಭಾಗದಲ್ಲಿ ಕಮಾನಿಕಾರದ ಚಿಕ್ಕ ಬಾಗಿಲನ್ನು ಅಳವಡಿಸಲಾಗಿದೆ. ದರ್ಗಾದ ಭವ್ಯ ಕಟ್ಟಡದ ಮೇಲೆ ನಾಲ್ಕು ಮೂಲೆಗಳಲ್ಲಿ ಚಿಕ್ಕದಾದ ಮಿನಾರಗಳನ್ನು ಅಳವಡಿಸಲಾಗಿದೆ. ಈ ಮಿನಾರಗಳ ಪಕ್ಕದಲ್ಲಿ ಚಿಕ್ಕದಾದ ಅಲಂಕಾರಿಕ ಕಮಾನಿನಾಕಾರದ ತೆನೆಗಳನ್ನು ಸುತ್ತಲೂ ಅಳವಡಿಸಲಾಗಿದೆ.

ಗರ್ಭಾಂಕಣದ ಮೇಲೆ ಸುಂದರವಾದ ವರ್ತುಳ ಗುಮ್ಮಟ(ಹುಜ್ರ)ವನ್ನು ನಿರ್ಮಿಸಲಾಗಿದೆ. ಗರ್ಭಾಂಕಣದ ರಕ್ಷಣೆಗಾಗಿ ನಾಲ್ಕು ಮೂಲೆಗಳಲ್ಲಿ ಕಂಬಗಳನ್ನು ನಿರ್ಮಿಸಲಾಗಿದೆ. ಇದರ ಸುತ್ತಲೂ ಪ್ರಾರ್ಥನೆಗೆ ಸ್ಥಳವಕಾಶವಿದೆ. ಗುಮ್ಮಟದ ಕೆಳ ಕೇಂದ್ರಭಾಗದಲ್ಲಿ ಸಂತರ ಡರಿ(ಸಮಾಧಿ) ಇದೆ. ಇದನ್ನು ಅರ್ಧ ಸಿಲಿಂಡರಿನ ಆಕಾರದಲ್ಲಿ ಎತ್ತರವಾಗಿ ರಚಿಸಲಾಗಿದೆ. ದರ್ಗಾದ ಬಲಭಾಗದಲ್ಲಿ ಮಸೀದಿ ನಿರ್ಮಿಸಲಾಗಿದೆ. ಒಟ್ಟಿನಲ್ಲಿ ಈ ದರ್ಗಾವು ಸೌಂದರ್ಯ ದೃಷ್ಠಿಯಿಂದ ಜನರನ್ನು ಭಕ್ತಿ ಭಾವದಿಂದ ಆಕರ್ಷಿಸುವ ತಾಣವಾಗಿದೆ. ಎಲ್ಲ ವರ್ಗದವರಿಗೂ ಅವಕಾಶ ಇರುತ್ತದೆ. ಇವರು ಚಿಸ್ತಿಯವರ ಶಿಷ್ಯರಾದ ಕಾರಣ ಚಿಸ್ತಿ ಸಂಪ್ರದಾಯದವರೆಂದು ಕರೆಯಲಾಗುತ್ತದೆ. ಇತ್ತೀಚಿಗೆ ಬದ್ರುದ್ಧೀನ್ ಆರಿಫ್‌ರ ಉರುಸು(ಪುಣ್ಯತಿಥಿಯು) ರಜಲ್ ೧೦ರಂದು ಅಂದರೆ ಇದೇ ಮೇ ೧೦, ೨೦೧೮ರಂದು ೭೮೭ನೆಯ ಉರಸುಆಗಿ ಆಚರಿಸಲಾಯಿತು. ಈ ಕಾರ್ಯಕ್ರಮ ದಲ್ಲಿ ಮುಸ್ಲಿಂ ವರ್ಗದವರು ಅತಿ ಹೆಚ್ಚಿನ ಜನಸಂಖ್ಯೆಯಲ್ಲಿ ಪಾಲ್ಗೊಂಡು ಸಂಭ್ರಮದಿಂದ ಆಚರಿಸಿದರು.[೬]

## ಹಜರತ ಯೂಸೂಪ ಖತಾಲ ಜಂಜಾನಿ ದರ್ಗಾ

ಖತಾಲ ಶಾ ವರ ದರ್ಗಾವು ಬೆಳಗಾವಿ ನಗರ ಕೇಂದ್ರ ಬಸ್ ನಿಲ್ದಾಣದಿಂದ ೦.೫ ಕಿ.ಮೀ. ಅಂತರದಲ್ಲಿದೆ. ಈ ಸಂತರನ್ನು ಜನಸಾಮಾನ್ಯರು ಪ್ರೀತಿಯಿಂದ ಖತಾಲ ಶಾ ಬಾಬಾ

ಎಂದು ಕರೆಯುತ್ತಾರೆ. ಇವರು ಬದ್ರುದ್ದಿನ ಆರಿಫ್‌ರ ನಂತರ ಬೆಳಗಾವಿಗೆ ಬಂದು ನೆಲಸಿದರು. ಯೂಸುಪ ಖತಾಲರು ಗುಲ್ಬರ್ಗಾದ ಶ್ರೇಷ್ಠ ಸಂತನಾದ ಹಜರತ ಸಯ್ಯದ ಬಂದೇ ನವಾಜ ಗರೀಬರ(೧೩೨೮–೧೪೩೨) ಪ್ರಮುಖ ಶಿಷ್ಯರಲ್ಲಿ ಒಬ್ಬರಾಗಿ ಅವರಿಂದ ಅಧ್ಯಾತ್ಮಿಕ ಜ್ಞಾನ ಪಡೆದು ಅವರ ವಿಚಾರಧಾರೆಗಳಿಂದ ಪ್ರಭಾವಿತಗೊಂಡು ಅವರ ಮಾರ್ಗದರ್ಶನದಲ್ಲಿ ಧಾರ್ಮಿಕ ಶಿಕ್ಷಣ ಪಡೆದರು. ಹಜರತ ಬಂದೇ ನವಾಜರು ದಕ್ಷಿಣ ಭಾರತಕ್ಕೆ ಧರ್ಮ ಪ್ರಚಾರ ಕಾರ್ಯ ನಿಮಿತ್ತ ಅಜ್ಮೀರದಿಂದ ತಮ್ಮ ೪೦೦ ಜನ ಶಿಷ್ಯರೊಂದಿಗೆ ಪ್ರಯಾಣ ಬೆಳಸಿದರು. ಅವರ ಪ್ರಯಾಣದಲ್ಲಿ ಯಸೂಪ್ ಖತಾಲಶಾವಲಿ ಮತ್ತು ರಾಜು ಖಲಾಲ ಹುಸೇನ ಇವರು ಕೂಡಾ ಬಂದೇ ನವಾಜರ ಶಿಷ್ಯರಾಗಿದ್ದು ಹೈದರಾಬಾದಿಗೆ ಬಂದ ನೆಲಸಿದರು. ಬೆಳಗಾವಿಯಲ್ಲಿ ನೆಲೆಸಿದ ಇನ್ನೊಬ್ಬ ಸಂತ ಬಾಷಿಬನ್‌ರು ಕೂಡಾ ಇವರ ಜೊತೆ ದೆಹಲಿ ಮತ್ತು ಪೂನಾ ಮಾರ್ಗವಾಗಿ ಬೆಳಗಾವಿಗೆ ಬಂದು ನೆಲಸಿದರು.

ಬಂದೇ ನವಾಜರ ಆಜ್ಞೆಯಂತೆ ಖತಾಲ ಶಾಯವರು ಬೆಳಗಾವಿಯಲ್ಲಿ ನೆಲಸಿ ಧರ್ಮ ಪ್ರಚಾರ ಕಾರ್ಯವನ್ನು ಕೈಕೊಂಡರು. ಗರೀಬ ನವಾಜರು ಬಹುಮನಿಗಳ ರಾಜಧಾನಿಯಾದ ಗುಲ್ಬರ್ಗಾಕ್ಕೆ ಪ್ರಯಾಣ ಬೆಳೆಸಿದರು.[೭] ಯೂಸೂಪ್ ಖತಾಲ್ ಶಾಯವರು ತಮ್ಮ ಹಲವು ಶಿಷ್ಯರೊಂದಿಗೆ ಬೆಳಗಾವಿಯಲ್ಲಿ ನೆಲಸಿ ಸಮಾಜದ ಏಳ್ಗೆಗೆ ಕಾರಣರಾಗಿದ್ದಾರೆ. ಇವರ ತಂದೆ ಹಿಸಾಮುದ್ದೀನ ಇವರ ಸಹೋದರನ ದರ್ಗಾವು ಪನ್ನಾಳಗಡದಲ್ಲಿದೆ. ಯೂಸೂಪ್ ಖತಾಲರು ಬೆಳಗಾವಿಯಲ್ಲಿ ಒಂದು ಖಾನಕಾ(ಧಾರ್ಮಿಕ ಶಿಕ್ಷಣ) ಕೇಂದ್ರವನ್ನು ಸ್ಥಾಪಿಸಿದರು. ಇಲ್ಲಿ ಕುರ್–ಆನ್ ಮತ್ತು ಹದೀಸ್, ಧರ್ಮ ಸಂಪ್ರದಾಯ ಆಚರಣೆ ಕುರಿತು ಶಿಕ್ಷಣ ನೀಡುತ್ತಿದ್ದರು. ಅಲ್ಲದೇ ಹಲವು ವಿದ್ಯಾರ್ಥಿಗಳಿಗೆ ಸಂತ ದೀಕ್ಷೆಯನ್ನು ನೀಡಿದ್ದಾರೆ. ಈ ಶಿಕ್ಷಣ ಕೇಂದ್ರದ ಮೂಲಕ ಧರ್ಮ ಪ್ರಸಾರ ಕಾರ್ಯ ಕೈಕೊಂಡು ಸಮಾಜದಲ್ಲಿ ಮೂಢನಂಬಿಕೆ ಆಚರಣೆ ಕುರಿತು ಮಾರ್ಗೋಪಾಯಗಳನ್ನು ಸೂಚಿಸಿ ಸಮಾಜದಲ್ಲಿ ಸಾಮರಸ್ಯ ಬೆಳಸಿದರು. ಇವರ ಆಚಾರ ವಿಚಾರಗಳಿಂದ ಪ್ರಭಾವಿತಗೊಂಡ ಜನಸಾಮಾನ್ಯರು ಇವರ ದರ್ಗಾಕ್ಕೆ ನಡೆದುಕೊಳ್ಳುತ್ತಾರೆ. ಇವರು ಸುಮಾರು ನೂರಕ್ಕಿಂತ ಹೆಚ್ಚು ಶಿಷ್ಯರನ್ನು ಹೊಂದಿರಿವರು ಎಂದು ಹೇಳಿಕೆಗಳಿವೆ. ಇವರ ಶಿಕ್ಷಣ ಕೇಂದ್ರವು ಬಹುಮನಿ ಆದಿಲ್ ಶಾಹಿಗಳಿಂದ ಪ್ರೊತ್ಸಾಹ ಪಡೆದು ಮುಂದುವರೆದಿತ್ತು. ಬಹುಮನಿ ಸುಲ್ತಾನರಿಗೆ ಮತ್ತು ಅಧಿಕಾರಿಗಳಿಗೆ ಮಾರ್ಗದರ್ಶನ ನೀಡುತ್ತಾ ರಾಜಕೀಯ ಒತ್ತಡಗಳಿಂದ ಸಮಾಜವನ್ನು ದೂರವಿರಸಿದರು. ಆದಿಲ್‌ಶಾಹಿಗಳು ಇವರ ಸೇವೆಯನ್ನು ಪ್ರಂಶಸಿ ಬೆಳಗಾವಿ ನಗರದ "ಖತಿಬ ಉಲ್ ಖತಾಬ" ಎಂಬ ಬಿರುದನ್ನು ನೀಡಿದರು.

ಯೂಸೂಫ್ ಖತಾಲರವರ ಉರಸು(ಪುಣ್ಯತಿಥಿಯು) ಪ್ರತಿವರ್ಷ ಶಹಬಾನ ೧೩ ರಂದು ಆಚರಿಸಲಾಗುತ್ತದೆ. ಇವರ ಮೂಲದ ಬಗ್ಗೆ ಹೆಚ್ಚಿನ ಮಾಹಿತಿ ದೊರೆವುದಿಲ್ಲ. ಇವರ ದರ್ಗಾದ ನಿರ್ವಹಣೆಗೆ ಮುಜಾವರಗಳು ಇನ್ನಿತರ ಭಕ್ತರು ಸೇವೆ ಸಲ್ಲಿಸುತ್ತಿದ್ದಾರೆ. ದರ್ಗಾ ನಿರ್ಮಾಣದಲ್ಲಿ ಆದಿಲ್‌ಶಾಹಿಗಳ ವಾಸ್ತುಶೈಲಿಯಲ್ಲಿ ನಿರ್ಮಿಸಲಾಗಿದೆ. ಈ ದರ್ಗಾಕ್ಕೆ ಎರಡು ದ್ವಾರಗಳಿದ್ದು ಒಂದು ಪೂರ್ವಕ್ಕೆ ಇನ್ನೊಂದು ಪಶ್ಚಿಮಕ್ಕೆ. ಪೂರ್ವದ ದ್ವಾರವು ಪ್ರಮುಖವಾಗಿದ್ದು ಎರಡು ಅಂತಸ್ತುಗಳಿಂದ ಬ್ರಹತ್ ಸ್ತಂಭಗಳ ಮೇಲೆ ಕಮಾನಿನಾಕಾರದ ದ್ವಾರವನ್ನು ಬಲು ಆಕರ್ಷನೀಯವಾಗಿ ನಿರ್ಮಿಸಲಾಗಿದೆ.

ಈ ದರ್ಗಾವನ್ನು ವಿಶಾಲವಾದ ಚೌಕತಳದ ಮೇಲೆ ಚೌಕಾಕಾರ ರೂಪದಲ್ಲಿ ನಿರ್ಮಿಸಲಾಗಿದೆ. ಕಟ್ಟಡದ ಮೂಲೆಯ ಮೇಲ್ಭಾಗದಲ್ಲಿ ನಾಲ್ಕು ಕಡೆ ಚಿಕ್ಕ ಮಿನಾರಗಳನ್ನು ಅಳವಡಿಸಲಾಗಿದೆ. ಮಧ್ಯದ ಗರ್ಭಾಂಕಣದ ಮೇಲೆ ವರ್ತುಳಕಾರದ ಗುಮ್ಮಟ ನಿರ್ಮಾಣ ಮಾಡಲಾಗಿದೆ. ಸಮಾಧಿಯ ಸುತ್ತಲೂ ನಾಲ್ಕು ಮೂಲೆಗಳಲ್ಲಿ ರಕ್ಷಣಾ ರೂಪದಲ್ಲಿ ಸ್ತಂಭಗಳನ್ನು ಅಳವಡಿಸಲಾಗಿದೆ. ಇದರ ಪಕ್ಕದಲ್ಲಿ ಸುತ್ತಲೂ ಪ್ರಾರ್ಥನೆಗೆ ಸ್ಥಳವಕಾಶವಿದೆ.

ಈ ದರ್ಗಾದ ಪಕ್ಕದಲ್ಲಿ ಇತ್ತೀಚಿನ ಆಧುನಿಕ ಶೈಲಿಯನ್ನು ಬಳಸಿ ನಿರ್ಮಿಸಿದ ಮಸೀದಿಯನ್ನು ಹಾಗೂ ಖಾನಕಾ(ಶಿಕ್ಷಣಕೇಂದ್ರ)ವನ್ನು ಸ್ಥಾಪಿಸಲಾಗಿದೆ. ಇವರ ದರ್ಗಾದ ಸುತ್ತಲೂ ಅವರ ಶಿಷ್ಯರ ಸಮಾಧಿಗಳಿವೆ.

**ಪೀರ ಸಯ್ಯದ ಉಮರ ಇದ್ರುದ ಬಾಷಾಬನ ದರ್ಗಾ**

ಈ ಬಾಷಿಬನ ದರ್ಗಾವು ಬೆಳಗಾವಿ ನಗರದ ಬೆಂಡಿ ಬಜಾರದಲ್ಲಿದೆ. ಇದ್ರುದ ಬಾಷಿಬನರವರು ಮೂಲತಹ ತರ್ರೈನ ದೇಶದ ಹಜರಮ್ಮದ ರಾಜ್ಯದಲ್ಲಿ ಹಿಜರಿ ಶಕೆ ೧೦೦೪ ರಲ್ಲಿ ಕ್ರಿ.ಶ. ೧೫೯೭ ಫೆಬ್ರುವರಿಯಲ್ಲಿ ಜನಸಿದರು. ಇನ್ನು ಕೆಲವು ವಿದ್ವಾಂಸರ ಪ್ರಕಾರ ಹಿಂದೂಸ್ತಾನದಲ್ಲಿ ಜನಸಿದರು ಎನ್ನಲಾಗಿದೆ. ಇವರು ಬಿನ ಹಸನ ಅಲಿ ಅಲ್ಲೈ ಹಜರಾಯಿ ಎಂಬ ಗುರುಗಳಲ್ಲಿ ಶಿಕ್ಷಣ ಪಡೆದು ಮುಂದೆ ತರೀಮ ಪಟ್ಟಣಕ್ಕೆ ಬಂದರು. ನಂತರ ತಮ್ಮ ಆಧ್ಯಾತ್ಮಿಕ ಪ್ರವಾಸವನ್ನು ಭಾರತಕ್ಕೆ ಮುಂದುವರಿಸಿ ಖ್ವಾಜಾ ಗರೀಬ ನವಾಜರ ಬಳಿ ಅಧ್ಯಾತ್ಮಿಕ ಮಾರ್ಗದರ್ಶನಕ್ಕೆ ಮುನ್ನೆಡೆದು ಅವರ ಪರಮಶಿಷ್ಯರಲ್ಲಿ ಒಬ್ಬರಾಗಿದ್ದರು. ಗರೀಬ ನವಾಜರೊಂದಿಗೆ ದಕ್ಷಿಣ ಭಾರತಕ್ಕೆ ಧರ್ಮ ಪ್ರಚಾರಕಾರ್ಯಕ್ಕಾಗಿ ಬೆಳಗಾವಿಗೆ ಬಂದು ನೆಲೆಸಿದರು. ಇಬ್ರಾಹಿಂ ಆದಿಲ್‌ಶಾ ಇವರನ್ನು ತನ್ನ ಆಸ್ಥಾನಕ್ಕೆ ಆಹ್ವಾನಿಸಿ ಶ್ರೇಷ್ಠ ವಜೀರ ಸ್ಥಾನ ನೀಡಿದನು.[೮]

ಇಬ್ರಾಹಿಂ ಆದಿಲ್‌ಶಾಹನ ಆಡಳಿತದಲ್ಲಿ ಮಾರ್ಗದರ್ಶಕರಾಗಿ ಸೇವೆ ಸಲ್ಲಿಸಿ ಆದಿಲ್‌ಶಾಹಿಗಳ ಆಸ್ಥಾನದ ಶ್ರೇಷ್ಠ ವಿದ್ವಾಂಸರಲ್ಲಿ ಇವರು ಒಬ್ಬರಾಗಿದ್ದರು. ಇಬ್ರಾಹಿಂ ಆದಿಲ್‌ಶಾಹ ತನ್ನ ಮಗಳನ್ನು ಬಾಷಬನ್‌ರ ಮಗನಾದ(ಅಬ್ದುಲ್ ರೆಹಮಾನ)ರಿಗೆ ವಿವಾಹ ಮಾಡಿದರೆನ್ನಲಾಗಿದೆ. ಅಷ್ಟೇ ಅಲ್ಲದೆ ಇವರ ಸಂಬಂಧದ ಪ್ರತೀಕವಾಗಿ ಹುದಲಿ, ಯಳ್ಳೂರು ಸುತ್ತ ಮುತ್ತಲಿನ ಭಾಗಗಳನ್ನು ಇನಾಂ ಆಗಿ ಬಾಷಿಬನ್‌ರಿಗೆ ನೀಡಲಾಯಿತು. ಬಾಷಿಬನರು ಆದಿಲ್‌ಶಾಹಿ ಆಡಳಿತದಿಂದ ನಿವೃತ್ತಿ ಹೊಂದಿ ಬೆಳಗಾವಿ ನಗರಕ್ಕೆ ಬಂದು ನೆಲೆಸಿದರು. ತಮಗೆ ನೀಡಿದ ಹುದಲಿ ಮತ್ತು ಯಳ್ಳೂರು ಭಾಗದ ಇನಾಂ ಜಮೀನನನ್ನು ಅಲ್ಲಿಯ ಜನರಿಗೆ ಉಳುಮೆಗೆ ನೀಡಿ ಅವರ ಜೀವನೋಪಾಯಕ್ಕೆ ನೆರವು ಮಾಡಿಕೊಟ್ಟರು. ಭೂಮಿ ದಾನ ನೀಡಿ ಮಾನವೀಯತೆ ಮೆರೆದ ಶ್ರೇಷ್ಠ ಸಂತರೆನಿಸಿದ್ದಾರೆ. ಈಗಲೂ ಆ ಗ್ರಾಮದ ಜನರು ಬಾಷಿಬನ ದರ್ಗಾಕ್ಕೆ ಭೇಟಿ ನೀಡಿ ತಮ್ಮ ಕೃತಜ್ಞತಾ ಭಾವವನ್ನು ಸಲ್ಲಿಸುತ್ತಾರೆ. ಇವರು ಬೆಳಗಾವಿಯಲ್ಲಿ ಧಾರ್ಮಿಕ ಶಿಕ್ಷಣ ಕೇಂದ್ರವಾದ (ಖಾನಕಾ)ವನ್ನು ತಮ್ಮ ದರ್ಗಾದ ಹಿಂಬದಿಯಲ್ಲಿ ಸ್ಥಾಪಿಸಿದರು. ಇಲ್ಲಿ ಕುರ್‌ಆನ್, ಹದೀಜ್, ಧಾರ್ಮಿಕ ಶಾಸ್ತ್ರಕ್ಕನುಗುಣವಾಗಿ ಅರೆಬಿಕ್ ಭಾಷೆಯಲ್ಲಿ ಶಿಕ್ಷಣ ನೀಡುತ್ತಿದ್ದರು. ಇದರೊಂದಿಗೆ ವ್ಯವಹಾರಿಕ ಜ್ಞಾನ ನೀಡುತ್ತಿದ್ದರು. ಅವರ ಮುರಿದರಿಗೆ(ಶಿಷ್ಯರು) ಸಂತ ದೀಕ್ಷೆಯನ್ನು ನೀಡಿ ಧರ್ಮ ಪ್ರಚಾರ ಕಾರ್ಯಕ್ಕೆ ಪ್ರೇರಣೆ ನೀಡಿದರು.

ಬಾಷಿಬನ್‌ರು ಬೆಳಗಾವಿ ಆಡಳಿದಲ್ಲಿ ಭಾಗವಹಿಸಿ ಧರ್ಮ, ರಾಜಕೀಯವನ್ನು ಒಂದೇ ಅಡಿಯಲ್ಲಿ ತೂಗಿಸಿ ಆಡಳಿತವನ್ನು ನಡೆಸಿದರು. ನಗರದಲ್ಲಿ ಪ್ರಾರ್ಥನೆಗೊಸ್ಕರ ಮಸೀದಿಗಳನ್ನು ನಿರ್ಮಿಸಿದ್ದಾರೆ. ಇವರು ಸ್ಥಾಪಿಸಿದ ಮಸೀದಿ, ಶಿಕ್ಷಣ ಕೇಂದ್ರ ಇಂದಿಗೂ ಮುಂದುವರಿದಿವೆ. ಬಾಷಿಬನರು ಹಿಜರಿ ಶಕೆ ಪ್ರಕಾರ ಶಹಬಾನ ೧೮, ೧೦೬೬ರಲ್ಲಿ, ಕ್ರಿ.ಶ.೧೬೫೫ರಲ್ಲಿ ಅವರ ೭೦ನೆಯ ವಯಸ್ಸಿನಲ್ಲಿ ಮರಣ ಹೊಂದಿದರು. ಈಗಲೂ ಕೂಡಾ ಪ್ರತಿವರ್ಷ ಶಹಬಾನ ೧೮ ರಂದು ಉರುಸು ಆಚರಣೆ ಮಾಡಲಾಗುತ್ತದೆ.

ಭಾಷಿಬನ ವಂಶದದವರು ಇಂದಿಗೂ ಬೆಳಗಾವಿ ನಗರದಲ್ಲಿ ವಾಸಿಸುತ್ತಿದ್ದಾರೆ. ಈ ವಂಶದ ಉತ್ತರಾಧಿಕಾರಿಗಳು ಆದಿಲ್‌ಶಾಹಿ ಆಡಳಿತದಲ್ಲಿ ಭಾಗವಹಿಸಿ ಬೆಳಗಾವಿ ನಗರದ ಇನಾಂದಾರರಾಗಿ ನೇಮಕಗೊಂಡರು. ಈ ವಂಶದವರಿಗೆ ಇನಾಂಆಗಿ ನೀಡಲಾದ ಖಾನಾಪುರ ಯಳ್ಳೂರ ಪ್ರದೇಶ ಮತ್ತು ಹುದಲಿ ಸುತ್ತಮುತ್ತಲಿನ ಭಾಗಗಳಿಗೆ ಈಗಲೂ ಬಾಷಿಬನ್‌ರ ಇನಾಂ ಪ್ರದೇಶಗಳೆಂದು ಕರೆಯಲಾಗುತ್ತದೆ. ನಗರ ಮಧ್ಯದಲ್ಲಿರುವ ದರ್ಬಾರ ಕೊಠಡಿಯು ಇವರ ವಂಶದ ಅಧೀನದಲ್ಲಿದೆ. ಈ ವಂಶದ ಉತ್ತರಾಧಿಕಾರಿಗಳ ದರ್ಗಾಗಳು ನಗರದಲ್ಲಿವೆ. ಬಾಷಿಬನರ ಮಗನಾದ ಅಬ್ದುಲ ರೆಹಮಾನ ಸಾಬರ ದರ್ಗಾವು ದರ್ಬಾರ ಗಲ್ಲಿಯಲ್ಲಿದೆ.

ಬಾಗ್ದಾದಿಯವರ ಮಾರ್ಗದರ್ಶನದಲ್ಲಿ ಸಮಾಜದಲ್ಲಿ ಶಾಂತಿ, ಸಾಮರಸ್ಯ ಸಹಬಾಳ್ವೆ ಸಾಧಿಸುವಂತೆ ಎಲ್ಲ ವರ್ಗದ ಜನರ ಹಿತಾಸಕ್ತಿಗಳ ಏಳ್ಗೆಗಾಗಿ ಶ್ರಮಿಸಿ ಅವರ ಮನದಲ್ಲಿ ಶಾಶ್ವತವಾದ ಸ್ಥಾನ ಪಡೆದಿದ್ದಾನೆ.

ಅಸದಖಾನ ಕ್ರಿ.ಶ.೧೫೪೪ ರಿಂದ ೧೫೪೯ ರವರೆಗೆ ೩೮ ವರ್ಷಗಳ ಕಾಲ ಬೆಳಗಾವಿಯಲ್ಲಿ ಆಳ್ವಿಕೆ ಮಾಡಿ ೧೦೪ನೇ ವಯಸ್ಸಿನಲ್ಲಿ ಮಂಡೊಳ್ಳಿ ಭಾಗಕ್ಕೆ ವಿಶ್ರಾಂತಿಗೆ ತೆರಳಿದಾಗ ಈತನನ್ನು ಹತ್ಯೆ ಮಾಡಲಾಯಿತು. ಈತನ ಶವವನ್ನು ಅವನ ಅನುಯಾಯಿಗಳು ಬೆಳಗಾವಿ ಕ್ಯಾಂಪ ಏರಿಯಾದಲ್ಲಿ ಸಮಾಧಿ ಮಾಡಿದರು. ಈತನ ಅಂತ್ಯ ಸಂಸ್ಕಾರಕ್ಕೆ ಎರಡನೆಯ ಇಬ್ರಾಹಿಂ ಆದಿಲ್‌ಶಾಹ ಭೇಟಿ ನೀಡಿದ ಎಂದು ತಿಳಿದು ಬರುತ್ತದೆ. ಈತನ ಆಡಳಿತ ಸಾಧನೆಗಳಿಂದ ಮತ್ತು ಸಾಮಾಜಿಕ ಕಾರ್ಯಗಳಿಂದ ಬೆಳಗಾವಿ ಭಾಗದ ಜನರು ಇಂದಿಗೂ ಆರಾಧನೆ ಮಾಡುತ್ತಾರೆ. ಪ್ರತಿವರ್ಷ ರಜಬ್ ೧೩ ರಂದು ಉರುಸು (ಪುಣ್ಯರಾಧನೆ) ಆಚರಿಸಲಾಗುತ್ತದೆ.[೧೧] ಅಸದಖಾನ ತನ್ನ ಆಡಳಿತ ಕಾರ್ಯಚಟುವಟಿಕೆಗಳಿಂದ ಬೆಳಗಾವಿಯ ಇತಿಹಾಸದಲ್ಲಿ ಸ್ಥಾನ ಪಡೆದುಕೊಂಡ ಶ್ರೇಷ್ಠ ಸರದಾರನಾಗಿದ್ದಾನೆ. ಮತ್ತು ಆದಿಲ್‌ಶಾಹಿ ವಂಶದ ಏಳ್ಗಿಗೆಗೆ ಶ್ರಮಿಸಿದ ಅಸದಖಾನ, ಇಸ್ಮಾಯಿಲ್ ಆದಲ್‌ಖಾನನಿಂದ ಬೆಳಗಾವಿಯ ಪ್ರದೇಶವನ್ನು ಜಹಗೀರವಾಗಿ ಪಡೆದು ವಿಜಾಪುರದ ಉಪರಾಜಧಾನಿಯಾಗಿ ರೂಪಿಸಿದ. ಆತ ರಾಜನಂತೆ ವೈಭವಿಪೂರಿತ ಆಡಳಿತವನ್ನು ನಡೆಸಿದ ಮಧ್ಯಕಾಲೀನ ಶ್ರೇಷ್ಠ ಆಡಳಿತಗಾರನೆನಸಿದ್ದಾನೆ.

ಈ ದರ್ಗಾವನ್ನು ವಿಶಾಲವಾದ ಅಂಗಳದಲ್ಲಿ ಚಿಕ್ಕ ಜಗತಿಯ ಮೇಲೆ ಬೃಹತ್ ಗೋಡೆಗಳನ್ನು ಅಳವಡಿಸಿ ಕಟ್ಟಡವನ್ನು ನಿರ್ಮಿಸಿದ್ದಾರೆ. ಗೋಡೆಯ ನಾಲ್ಕು ಮೂಲೆ ಭಾಗಗಳಲ್ಲಿ ಚಿಕ್ಕದಾದ ಮಿನಾರ್‌ಗಳನ್ನು ಮತ್ತು ಗೋಡೆಯ ಮಧ್ಯ ಭಾಗದಲ್ಲಿ ಕಮಾನುಗಳನ್ನು ಅಲಂಕಾರ ರೂಪದಲ್ಲಿ ಕೆತ್ತಲಾಗಿದೆ. ದರ್ಗಾದ ಚಚ್ಚ ಭಾಗದ ಮೇಲೆ ಬಾಗಿದ ಗುಮ್ಮಟವನ್ನು ಅಳವಡಿಸಿ ನಿರ್ಮಿಸಲಾಗಿದೆ. ಗೋಡೆಗಳ ಮೇಲೆ ಅಲಂಕಾರಿಕವಾಗಿ ಕಮಾನಿನ ಆಕಾರದ ತುರಾಯಿಗಳನ್ನು ರಚಿಸಲಾಗಿದೆ. ದರ್ಗಾದ ಪೂರ್ವಕ್ಕೆ ಮತ್ತು ದಕ್ಷಿಣಕ್ಕೆ ಚಿಕ್ಕದಾದ ಕಮಾನುಗಳಿಂದ ಕೂಡಿದ ದ್ವಾರಗಳನ್ನು ಕಾಣಬಹುದು. ನಂತರ ಕಾಲಘಟ್ಟದಲ್ಲಿ ಅವಶ್ಯಕತೆ ಅನುಸಾರವಾಗಿ ದರ್ಗಾದ ಮುಂಭಾಗದ ಕಟ್ಟಡವನ್ನು ನಿರ್ಮಿಸಲಾಗಿದೆ. ಈ ದರ್ಗಾದ ಬಲಭಾಗದಲ್ಲಿ ನೀರಿನ ವ್ಯವಸ್ಥೆಗೆ ಬಾವಿಯನ್ನು ಕೊರೆಯಲಾಗಿದೆ. ಅಸದಖಾನ ಸಮಾಧಿಯನ್ನು ಒಬ್ಬ ಬ್ರಾಹ್ಮಣ ನಿರ್ಮಿಸಿರುವುದು ವಿಶೇಷ.

### ಕೈಸರ ಶಾವಲಿ ದರ್ಗಾ

ಕೈಸರ ಶಾವಲಿ ದರ್ಗಾವು ಈಗೀನ ಪೋಲಿಸ್ ಹೆಡ್‌ಕ್ವಾಟರ್ಸನ ಭಾಗದಲ್ಲಿದೆ. ಕೈಶರ ಶಾವಲಿ ಅಸದಖಾನ ಮಗ ಕಿಶ್ವರಖಾನನೆಂದು ಸ್ಥಳೀಯರು ಹೇಳುತ್ತಾರೆ. ಆದರೆ ಅಸದಖಾನ

ಮಗ ಕಿಶ್ವರಖಾನನ ಸಮಾಧಿಯು ವಿಜಾಪುರದ ನವಭಾಗದಲ್ಲಿ ಇದೆ ಎಂದು ಬೆಳಗಾವಿ ಗೇಜಿಟರ್‌ನಲ್ಲಿ ಉಲ್ಲೇಖಿಸಲಾಗಿದೆ.[೨೨] ಈ ಕೈಶರಶಾವಲಿ ಸಂತರು ಬೇರೆಯಾಗಿದ್ದು ಇವರ ಮೂಲದ ಬಗ್ಗೆ ಮಾಹಿತಿಗಳಿಲ್ಲ. ಈ ದರ್ಗಾವನ್ನು ಆಧುನಿಕ ಕಟ್ಟಡಗಳಿಂದ ವಿಶಾಲವಾದ ಆವರಣದಲ್ಲಿ ಸುತ್ತಲೂ ಪ್ರಾಕಾರ ಗೋಡೆಯನ್ನು ಅಳವಡಿಸಿ ಮಧ್ಯದಲ್ಲಿ ನಿರ್ಮಿಸಲಾಗಿದೆ. ಈ ದರ್ಗಾದ ಮಧ್ಯಭಾಗದಲ್ಲಿ ಕೈಸರಖಾನನ ಸಮಾಧಿಯಿದ್ದು. ಇವರ ಸಮಾಧಿಯ ಪಕ್ಕದಲ್ಲಿ ಅವರ ಶಿಷ್ಯರ ಮತ್ತು ಅನುಯಾಯಿಗಳ ಸಮಾಧಿಗಳಿವೆ. ದರ್ಗಾ ಸುತ್ತಲೂ ಆಧುನಿಕ ದಖ್ಖನ್ ವಾಸ್ತುಶೈಲಿಯನ್ನು ಬಳಿಸಿ ಗೋಡೆಯ ಮೇಲೆ ಚಿಕ್ಕ ಚಿಕ್ಕ ಮಿನಾರಗಳನ್ನು ಅಲಂಕಾರ ರೂಪದಲ್ಲಿ ದರ್ಗಾವನ್ನು ಅಲಂಕರಿಸಲಾಗಿದೆ.

ಕೈಸರಖಾನ ದರ್ಗಾವನ್ನು ಆಯತಕಾರದಲ್ಲಿ ಗರ್ಭಾಂಕಣವನ್ನು ನಿರ್ಮಿಸಿ ಒಂದರ ಪಕ್ಕದಲ್ಲಿ ಒಂದು ಸಮಾಧಿಗಳನ್ನು ಮಾಡಲಾಗಿದೆ. ಗರ್ಭಾಂಕಣದ ಸುತ್ತಲೂ ನಾಲ್ಕು ಮೂಲೆಗಳಲ್ಲಿ ರಕ್ಷಣಾ ರೂಪದಲ್ಲಿ ಸ್ತಂಭಗಳನ್ನು ನಿರ್ಮಿಸಲಾಗಿದೆ. ಈ ದರ್ಗಾದ ನಿರ್ವಹಣೆಯು ವಕ್ತ ಮಂಡಳಿ ಆಡಳಿತದ ಅಡಿಯಲ್ಲಿ ಧಾರ್ಮಿಕ ಕಾರ್ಯಗಳು ನೆರವೇರುತ್ತದೆ. ಈ ದರ್ಗಾದ ಉರುಸು ಪ್ರತಿವರ್ಷ ಎಪ್ರೀಲ್ ತಿಂಗಳಲ್ಲಿ ಆಚರಿಸಲಾಗುತ್ತದೆ.

### ಅಬ್ದಾಲ ಶಾವಲಿ ದರ್ಗಾ

ಇವರ ದರ್ಗಾವು ತುರ್ಕಮಟ್ಟಿಯಲ್ಲಿದೆ. ಅಬ್ದಾಲ ಶಾ ಅವರು ಮೂಲತಹ ತುರ್ಕದಿಂದ ಬಂದವರೆಂದು ಹೇಳಲಾಗುತ್ತಿದೆ. ಇವರು ತುರ್ಕದಿಂದ ಬಂದು ಇಲ್ಲಿ ನೆಲಸಿದ ಕಾರಣ ಈ ಭಾಗವನ್ನು ತುರ್ಕಮಟ್ಟಿ ಎಂದು ಕರೆಯಲಾಗುತ್ತದೆ. ಈಗ ಪ್ರದೇಶವು ಮಿಲ್ಟ್ರಿ ವಿಭಾಗದ ಅಡಿಯಲ್ಲಿದೆ. ಅಬ್ದಾಲ ಶಾವರ ಮೂಲ ಹೆಸರು ಹಜರತ ಸಯ್ಯದ ಹುಸೇನ ಅಬ್ದಾಲ ಶಾ. ಅಬ್ದಾಲ ಶಾವರು ವಿಜಾಪುರದ ಆಡಳಿತದಲ್ಲಿ ಬೆಳಗಾವಿ ನಗರದ ಕೊತ್ವಾಲರಾಗಿದ್ದರು. ಇವರು ನಗರದಲ್ಲಿ ಒಂದು ಮಸೀದಿಯನ್ನು ನಿರ್ಮಿಸಿದರು. ಅದನ್ನು ಸ್ಥಳೀಯರು ಏಕ ಕಮಾನ ಮಸೀದಿ ಎಂದು ಕರೆಯುತ್ತಾರೆ.

ಅಬ್ದಾಲ ಶಾವರು ದಿನಂಪ್ರತಿ ಈ ಮಸೀದಿಯ ಒಂದು ಕಮಾನಿನ ಬಳಿಯೇ ಪ್ರಾರ್ಥನೆ ಮಾಡುತ್ತಿದ್ದರಿಂದ ಈ ಮಸೀದಿಯನ್ನು ಏಕ ಕಮಾನ ಮಸೀದಿ ಎಂದು ಕರೆಯಲಾಗುತ್ತದೆ. ಅಬ್ದಾಲ ಶಾ ಈ ಮಸೀದಿ ನಿರ್ವಹಣೆಗೆ ಚಿರಾನ ಎಂಬ ಅಧಿಕಾರಿಯನ್ನು ನೇಮಿಸಿ ಸ್ವಲ್ಪ ಜಹಗೀರನ್ನು ನೀಡಲಾಗಿತ್ತು. ಈ ಪ್ರದೇಶವನ್ನು ಚಿರಾನ ಖಡ್ಡಾ ಎಂದು ಕರೆಯಲಾಗುತಿತ್ತು. ಈಗ ಚಿರಾನ ನಗರವೆಂದು ಮಾರ್ಪಟ್ಟಿದೆ. ಇವರ ಸಮಾಧಿಯು ತುರ್ಕಮಟ್ಟಿ ಗುಡ್ಡದಲ್ಲಿ ಇರಲು ಕಾರಣವೆಂದರೆ ಇವರು ಬೆಳಗಾವಿ ನಗರದ ಕೊತ್ವಾಲರಾಗಿದ್ದ ಕಾರಣ ಇಲ್ಲಿಯೇ

ವಾಸಿಸುತ್ತಿದ್ದರು. ಈ ಸ್ಥಳವು ಬೆಳಗಾವಿ ನಗರಕ್ಕಿಂತ ಎತ್ತರವಾದ ಪ್ರದೇಶವಾಗಿದ್ದು ನಗರದ ಪೂರ್ಣ ವೀಕ್ಷಣೆಗೆ ಸೂಕ್ತ ಸ್ಥಳವಾಗಿದೆ. ಮತ್ತು ಪೂರ್ವದ ಕಡೆಯಿಂದ ಬರುವ ಶತ್ರುಗಳ ವೀಕ್ಷಣೆಗಾಗಿ ಅತೀ ಸೂಕ್ತವಾಗಿತ್ತು ಆದ್ದರಿಂದ ಇವರ ದರ್ಗಾವನ್ನು ಇಲ್ಲಿ ನಿರ್ಮಿಸಲಾಗಿದೆ.[೧೩] ಈ ದರ್ಗಾವನ್ನು ಇತ್ತೀಚಿನ ವಾಸ್ತುವನ್ನು ಅನುಸರಿಸಿ ರಕ್ಷಣಾ ರೂಪವಾಗಿ ಸಮಾಧಿ ಸುತ್ತಲೂ ಚಿಕ್ಕ ಗಾತ್ರದಲ್ಲಿ ಕಟ್ಟಡವನ್ನು ನಿರ್ಮಿಸಲಾಗಿದೆ. ಈ ದರ್ಗಾವು ಬೆಳಗಾವಿ ನಗರದಿಂದ ಆರು ಕಿ.ಮೀ ಅಂತರದಲ್ಲಿದೆ. ಅಬ್ದಾಲ ಶಾವರು ಶಿಸ್ತಿನ ಸಿಪಾಯಿಯಂತೆ ಪ್ರಾಮಾಣಿಕ ಸೇವೆಗೈದ ಒಬ್ಬ ಶೂರ ಆಡಳಿತಗಾರರಾಗಿದ್ದಾರೆ. ಈ ಸಂತರ ಉರುಸು ಹಿಜರಿ ಶಕೆ ಪ್ರಕಾರ ರಜಬ್ ೫–೬ ಏಪ್ರಿಲ್‌ನಲ್ಲಿ ಆಚರಿಸಲಾಗುತ್ತದೆ.

**ಹಜರತ್ ಸಯ್ಯದ್ ಹುಸೇನ್ ಶಾ ವಲಿ ಖಾದ್ರಿ ಉರ್ಫ್ ಮಗರಿಬಿ ಪೀರ್**

ಹುಸೇನ್ ಶಾ ಖಾದರಿಯವರ ದರ್ಗಾವು ಮಜಗಾಂವದಲ್ಲಿದೆ. ಖಾದರಿಯವರು ಕ್ರಿ.ಶ. ೧೮೯ ರಲ್ಲಿ ಮೊರ್‍ಯಾಕ್ಕೊದ ಒಂದು ರಾಜಮನೆತನದಲ್ಲಿ ಜನಿಸಿದರು ಮೂಲತಃ ಖೈರಾಬಾದನಿಂದ ಈಜಿಪ್ತಗೆ ತೆರಳಿದರು. ನಂತರ ಬಾಗ್ದಾದಕ್ಕೆ ಹೋಗಿ ಹಜರತ್ ಗೌಸ ಸಂದಾನಿ ದರ್ಗಾದಲ್ಲಿ ಪ್ರಾರ್ಥನೆ ಸಲ್ಲಿಸಿದರು. ಸಂದಾನಿಯವರ ಮಾರ್ಗದರ್ಶನದಲ್ಲಿ ಜ್ಞಾನವನ್ನು ಪಡೆದರು. ಇವರ ಆಜ್ಞೆಯ ಮೇರೆಗೆ ಭಾರತಕ್ಕೆ ಧರ್ಮ ಪ್ರಚಾರ ನಿಮಿತ್ತ ಪ್ರಯಾಣ ಬೆಳೆಸಿ ಮಲಬಾರ ತೀರಕ್ಕೆ ಬಂದು ಸೇರಿದರು. ಅಲ್ಲಿ ಕೆಲವು ದಿನಗಳ ಕಾಲ ನೆಲೆಸಿ ನಂತರ ಶ್ರೀಲಂಕಾಕ್ಕೆ ಪ್ರಯಾಣವನ್ನು ಮುಂದುವರೆಸಿದರು. ಅಲ್ಲಿ ಕೆಲವು ದಿನಗಳ ಕಾಲ ನೆಲೆಸಿ ಧರ್ಮ ಪ್ರಚಾರ ಮಾಡುತ್ತಾ ಮತ್ತೆ ಕರ್ನಾಟಕ, ಮಹಾರಾಷ್ಟ್ರದ ಗಡಿ ಭಾಗವಾದ ಮಾಹೆ ಮತ್ತು ಮಹಾಬಲೇಶ್ವರದಲ್ಲಿ ಬಂದು ನೆಲೆಸಿದರು. ತಮ್ಮ ಆಧ್ಯಾತ್ಮಿಕ ವಿಚಾರ ಧಾರೆಗಳಿಂದ ಹಲವು ಶಿಷ್ಯರನ್ನು ಪಡೆದರು. ಇಲ್ಲಿಯೇ ಕೆಲವು ದಿನಗಳ ಕಾಲ ನೆಲಸಿ ಹಲವು ಶಿಷ್ಯರಿಗೆ ಸಂತ ದೀಕ್ಷೆಯನ್ನು ನೀಡಿದರು. ಇವರ ಅನುಯಾಯಿಗಳು ಇನ್ನೂ ಆ ಭಾಗದಲ್ಲಿ ನೆಲೆಸಿದ್ದಾರೆ.



ನಂತರ ತಮ್ಮ ಆಧ್ಯಾತ್ಮಿಕ ಪ್ರಯಾಣವನ್ನು ಮುಂದುವರೆಸಿ ಬೆಳಗಾವಿ ನಗರಕ್ಕೆ ಬಂದರು. ನಗರದ ಕ್ಯಾಂಪ್ ಬಳಿಯ ಮಸೀದಿಯಲ್ಲಿ ಪ್ರಾರ್ಥನೆ ಸಲ್ಲಿಸಿ ತಾವು ಇಲ್ಲಿಯೇ ಇರಲು ನಿರ್ಧರಿಸಿದರು. ಅವರು ಶಿಕ್ಷಣದ ಮೂಲಕ ಸಮಾಜವನ್ನು ಸುಧಾರಿಸಲು ಸಾಧ್ಯ ಎಂದು ತಿಳಿದು ಬೆಳಗಾವಿಯಿಂದ ೭ ಕಿ.ಮೀ ಅಂತರದಲ್ಲಿ ಮಜಗಾಂವ ಬಳಿ ಮರಾಠರಿಂದ ಭೂಮಿಯನ್ನು ಖರೀದಿಸಿ ಅರೆಬಿಕ್ ಶಿಕ್ಷಣ ಕೇಂದ್ರವನ್ನು ಸ್ಥಾಪಿಸಿದರು. ಇವರಿಗೆ ಅರಬ್ಬಿ ಭಾಷೆಯಲ್ಲಿ ಮಾತ್ರ ಮಾತನಾಡುತಿದ್ದರು. ಇವರು ಸ್ಥಾಪಿಸಿದ ಖಾನಕಾ (ಶಿಕ್ಷಣ ಕೇಂದ್ರ) ಇಂದಿಗೂ ಕಾರ್ಯನಿರ್ವಹಿಸುತ್ತಿದೆ. ಇವರ ವಂಶಸ್ಥರು ಮತ್ತು ಶಿಷ್ಯಂದಿರು ಕೇರಳದಲ್ಲಿ

ನೆಲೆಸಿದ್ದಾರೆ. ೧೨೭ನೇ ವಯಸ್ಸಿನಲ್ಲಿ ಕ್ರಿ.ಶ.೧೯೩೬ರಲ್ಲಿ ಮರಣ ಹೊಂದಿದರು. ಇವರ ಸಮಾಧಿಯು ಅವರು ಸ್ಥಾಪಿಸಿದ ಖಾನಕಾ ಮಧ್ಯದ ಒಂದು ಕೋಣೆಯಲ್ಲಿ ಕಾಣಬಹುದು. ಇವರ ಸಮಾಧಿ ಸುತ್ತಲೂ ರಕ್ಷಣಾ ದೃಷ್ಟಿಯಿಂದ ಸ್ತಂಭಗಳನ್ನು ನಿರ್ಮಿಸಲಾಗಿದೆ. ಇವರ ಪುಣ್ಯತಿಥಿ (ಉರುಸು) ಪ್ರತಿವರ್ಷ ಮೊಹರಂ ೨೭ರಂದು ಆಚರಿಸಲಾಗುತ್ತದೆ.[೧೪]

## ಯಮನಾಪುರ ದರ್ಗಾ

ಈ ದರ್ಗಾವು ಬೆಳಗಾವಿ ನಗರದಿಂದ ೭ ಕಿ.ಮೀ ಅಂತರದಲ್ಲಿ ಎನ್.ಎಚ್. ೪ ಹೆದ್ದಾರಿಯ ಪಕ್ಕದಲ್ಲಿದೆ. ಇವರು ಮೂಲತಹ ಯೆಮನ ಪ್ರದೇಶದಿಂದ ಬಂದು ನೆಲೆಸಿದ ಕಾರಣ ಈ ಭಾಗಕ್ಕೆ ಯಮನಾಪುರ ಎಂದು ಕರೆಯಲಾಗುತ್ತದೆ. ಇವರ ಮೂಲ ಹೆಸರು ಹಜರತ್ ಪೀರ್ ಗದ್ದು ಸಾಹೇಬ್ ಇವರನ್ನು ಜನರು ಮಿರ ಶಾವಲಿ ಎಂದು ಕರೆಯುತ್ತಿದ್ದರು. ಇವರು ಎರಡನೇ ಇಬ್ರಾಹಿಂ ಆದಿಲ್‌ಶಾಹನ ಸಮಕಾಲೀನವರಾಗಿದ್ದರು. ಬೆಳಗಾವಿಯಿಂದ ಸ್ವಲ್ಪ ದೂರದಲ್ಲಿರುವ ಯಮನಾಪುರದ ಭಾಗದ ಸುತ್ತಮುತ್ತಲಿನಲ್ಲಿ ಧರ್ಮ ಪ್ರಚಾರ ಕೈಗೊಂಡರು. ಬಹು ಸಂಖ್ಯಾತರಾದ ಹಿಂದೂಗಳ ಜೊತೆ ಬೆರೆತು ಸಾಮಾಜಿಕ ಸಾಮರಸ್ಯ ಬೆಳೆಸಿದ ಶ್ರೇಷ್ಠ ಸಂತರೆನಿಸಿದ್ದಾರೆ. ಕೆಲವರು ಇವರ ಧರ್ಮ ಪ್ರಚಾರದ ವಿರುದ್ಧ ಅಸಮಾಧಾನಗೊಂಡು ಇವರನ್ನು ಹತ್ಯೆ ಮಾಡಿದರು ಎನ್ನಲಾಗಿದೆ. ಈ ಸಂತರು ಅತಿ ಸರಳ ಸ್ವಭಾವದ ವ್ಯಕ್ತಿಯಾಗಿದ್ದರು. ಧರ್ಮಕ್ಕಾಗಿ ತಮ್ಮ ಪ್ರಾಣವನ್ನೆ ತ್ಯಾಗ ಮಾಡಿದ ಶ್ರೇಷ್ಠ ಸಂತ ಎನ್ನಲಾಗಿದೆ. ಇವರ ಉರುಸು ಜನೇವರಿ ಮೊದಲನೇಯ ಶುಕ್ರವಾರದಂದು ಆಚರಿಸಲಾಗುತ್ತದೆ. ಈ ಹಬ್ಬಕ್ಕೆ ಯಮನಾಪುರದ ಸುತ್ತಮುತ್ತಲಿನ ಗ್ರಾಮಗಳಾದ ಕಾಕತಿ, ಕಿರಣಗಿ, ಕಂಗ್ರಾಳ, ಗೊಂಡವಾಡ, ಮದನಹಳ್ಳಿ ಗ್ರಾಮಸ್ಥರು ಈ ದರ್ಗಾಕ್ಕೆ ಭೇಟಿ ನೀಡಿ ಉರುಸು ಹಬ್ಬವನ್ನು ಸಂಭ್ರಮದಿಂದ ಆಚರಿಸುತ್ತಾರೆ. ಹೆಚ್ಚಾಗಿ ಇಸ್ಲಾಂಯೇತರ ಜನಾಂಗ ಈ ದರ್ಗಾಕ್ಕೆ ಭೇಟಿ ನೀಡುತ್ತಾರೆ. ಈ ಊರಿನ ಪಟೇಲ (ಗೌಡ)ನ ಮನೆಯಿಂದ ಸಂದಲ್ ಕಾರ್ಯಕ್ರಮ ನೆರವೇರುತ್ತದೆ.[೧೫]

ಈ ದರ್ಗಾವನ್ನು ಜನನಿಬಿಡತ ಪ್ರದೇಶದಲ್ಲಿ ಎತ್ತರವಾದ ಜಗತಿಯ ಮೇಲೆ ಹೊರ ಆವರಣದಲ್ಲಿ ನಿರ್ಮಿಸಲಾಗಿದೆ. ಇವರ ಸಮಾಧಿ ಬಳಿ ಇನ್ನೂ ಕೆಲವು ಶಿಷ್ಯರ ಸಮಾಧಿಗಳನ್ನು ಮಾಡಲಾಗಿದೆ. ಈ ದರ್ಗಾದ ಪಕ್ಕದಲ್ಲಿ ಒಂದು ವಿಶಿಷ್ಠವಾದ ವಿಜಾಪುರ ವಾಸ್ತುಶೈಲಿಯಲ್ಲಿ ಮಸೀದಿಯನ್ನು ಶೇರಖಾನ ಆಡಳಿತದ ಅವಧಿಯಲ್ಲಿ ನಿರ್ಮಿಲಾಗಿದೆ.[೧೬]

## ಹಜರತ್ ಸಯ್ಯದ್ ಹಸನ್ ಮುರಾದ ಶಾ ವಲಿ, ಉರ್ಫ ಖಾದ್ರಿ ದರ್ಗಾ

ಮುರಾದ ಅಲಿ ಶಾ ಅವರ ದರ್ಗಾವು ಬೆಳಗಾವಿ ರೇಲ್ವೆ ಸ್ಟೇಶನ್ ಬಳಿ ಕಾಣಬಹುದು. ಇವರು ಮೂಲತ: ಯಮನ್‌ದಿಂದ ಬಂದವರು. ಇವರು ಯಾವಾಗಲು ಫಕೀರರ ಹಾಗೆ

ಜೀವನ ಮಾಡುತ್ತಿದ್ದರು. ಇವರು ಅಬ್ದುಲ್ ರೆಹಮಾನ್ ಎಂಬುವರ ಶಿಷ್ಯರಾಗಿದ್ದು, ರೆಹಮಾನವರ ದರ್ಗಾವು ಕೊಲ್ಹಾಪುರ ಜಿಲ್ಲೆಯ ಇಲಾಸ ಎಂಬಲ್ಲಿದೆ. ಖಾದ್ರಿಯವರು ರೆಹಮಾನ ಅವರ ಮಾರ್ಗದರ್ಶನದಲ್ಲಿ ಆಧ್ಯಾತ್ಮಿಕ ವಿಚಾರಧಾರೆಗಳನ್ನು ಪಡೆದುಕೊಂಡು ಧರ್ಮಪ್ರಚಾರ ನಿಮಿತ್ತ ಬೆಳಗಾವಿಗೆ ಸುಮಾರು ೧೭ನೇ ಶತಮಾನದ ಅಂತ್ಯದಲ್ಲಿ ಬಂದರು ಎನ್ನಲಾಗಿದೆ. ಇವರ ಮೂಲ ಹೆಸರು ಹಜರತ್ ಸಯ್ಯದ್ ಮಹಮದ್ ಹುಸೇನ್ ಉರ್ಫ ಸಯ್ಯದ್ ಅಹಮದ ಖಾದ್ರಿ. ಜನಸಾಮಾನ್ಯರು ಪ್ರೀತಿಯಿಂದ ಮುರಾದ್ ಅಲಿ ಶಾ ಬಾಬಾ ಎಂದು ಕರೆಯುತ್ತಾರೆ. ಖಾದ್ರಿ ಪರಂಪರೆಯೊಂದಿಗೆ ಸಂಬಂಧ ಹೊಂದಿದ ಇವರು ತಮ್ಮ ಗುರುಗಳ ಆಚಾರ ವಿಚಾರ ಸಂದೇಶಗಳನ್ನು ಪರಿಪಾಲಿಸುತ್ತಾ ಸಮಾಜಕ್ಕೆ ಮಾದರಿಯಾದರು.

ಇವರ ಸಮಾಧಿಯು ಮೂಲತಃ ಸಾರ್ವಜನಿಕ ಖಬರಸ್ಥಾನ (ರುದ್ರಭೂಮಿ) ಯಲ್ಲಿದ್ದಿತು. ಖಬರಸ್ಥಾನ ಈಗೀನ ರೇಲ್ವೆ ಸ್ಟೇಶನ್‌ನ ಪಕ್ಕದ ದಾರಿಯಲ್ಲಿದ್ದಿತು. ಅವರು ಜನಸಾಮಾನ್ಯರ ಕನಸಿನಲ್ಲಿ ಬಂದು ತನ್ನ ಸಮಾಧಿಯನ್ನು ಸ್ಥಳಾಂತರಿಸುವಂತೆ ಹೇಳಿದರು. ಆಗ ಈ ಸಮಾಧಿ ಸ್ಥಳವು ಬ್ರಿಟಿಷರ ಅಧೀನದಲ್ಲಿತ್ತು. ಇವರ ಶವವು ಒಂದು ವೇಳೆ ಅಚ್ಚುಕಟ್ಟಾಗಿದ್ದರೆ ಬದಲಾಯಸಲು ಅನುಮತಿ ನೀಡಿದರು ಎನ್ನಲಾಗಿದೆ. ಮೆಕ್ಕಾಕ್ಕೆ ಹೋಗಿ ಬಂದಂತಹ ಹಾಜಿ ಹುಸೇನ ಖಾನ ಎಂಬ ವ್ಯಕ್ತಿಯಿಂದ ಆ ಸಮಾಧಿಯನ್ನು ಅಗೆದು ನೋಡಿದಾಗ ಆ ಶವವು ಮೊದಲಿನಂತೆ ಇದ್ದದನ್ನು ನೋಡಿ ಜನರು ಆಶ್ಚರ್ಯಕರಗೊಂಡು ಬ್ರಿಟಿಷರ ಮೆರವಣಿಗೆಯ ಮೂಲಕ ಮುರಾದ ಶಾವಲಿಯವರು ತಪ್ಪಸ್ಸು ಮಾಡಿದಂತ ಸ್ಥಳದಲ್ಲಿ ಸಮಾಧಿ ಮಾಡಲಾಯಿತು. ಈ ಸ್ಥಳವು ಹೊಸೂರ ಸರ್ಕಾರದ ಅಧೀನದಲ್ಲಿದ್ದಿತು. ಭೂಮಿಯನ್ನು ಉಚಿತವಾಗಿ ಈ ದರ್ಗಾಕ್ಕೆ ನೀಡಿದರು.[೧೭] ಮುರಾದ ಅಲಿಶಾವರು ಬೆಳಗಾವಿಗೆ ಬಂದ ೧೦೦ನೇ ಸಂತರೆನಿಸಿದ್ದಾರೆ.

ದರ್ಗಾವನ್ನು ಸಾಮಾನ್ಯ ವಾಸ್ತುಶೈಲಿಯನ್ನು ಅನುಸರಿಸಿ ನಿರ್ಮಿಸಲಾಗಿದೆ. ದರ್ಗಾದ ಸುತ್ತಲೂ ಪ್ರಾಕಾರ ಗೋಡೆಯನ್ನು ನಿರ್ಮಿಸಲಾಗಿದ್ದು ಉತ್ತರಕ್ಕೆ ಅಭಿಮುಖವಾಗಿ ದರ್ಗಾವನ್ನು ನಿರ್ಮಿಸಲಾಗಿದೆ. ದರ್ಗಾವನ್ನು ಚಿಕ್ಕ ಜಗತಿಯ ಮೇಲೆ ಚೌಕಾಕಾರದ ಗೋಡೆಯನ್ನು ನಿರ್ಮಿಸಲಾಗಿದೆ. ಗರ್ಭಾಂಕಣದ ಸುತ್ತಲೂ ಮತ್ತು ಮೂಲೆಗಳಲ್ಲಿ ಸ್ತಂಭಗಳಿಂದ ಕೂಡಿದೆ. ಗರ್ಭಾಂಕಣದ ಮೇಲೆ ಕಟ್ಟಿಗೆಯನ್ನು ಬಳಸಿ ನಿರ್ಮಿಸಿದ ಚಚ್ಚ ಭಾಗವನ್ನು ಅತಿ ಸುಂದರವಾಗಿ ಚತುಷ್ಕೇಂದ್ರದ ಮಧ್ಯದಲ್ಲಿ ಸೇರವಂತೆ ರಚಿಸಲಾಗಿದೆ. ದರ್ಗಾದ ಒಳಗಡೆ ಪ್ರಾರ್ಥನೆಗಾಗಿ ಸ್ಥಳವಕಾಶವಿದೆ. ದರ್ಗಾದ ಮುಂಭಾಗದಲ್ಲಿ ಸಾಮಾನ್ಯ ವಾಸ್ತುಶೈಲಿಯಲ್ಲಿ ಮಸೀದಿಯನ್ನು ನಿರ್ಮಿಸಲಾಗಿದೆ. ಮಸೀದಿಯ ಹಿಂಭಾಗದಲ್ಲಿ ಈದ್ಗಾ ಮೈದಾನ ಹಾಗೂ ಖಬರಸ್ತಾನವು ಕೂಡಾ ಇಲ್ಲಿವೆ.

## ಲಾಲ ಶಾವಲಿ ದರ್ಗಾ

ಲಾಲಶಾವಲಿ ದರ್ಗಾವು ಶಿವಾಜಿನಗರದ ೫ನೇ ಕ್ರಾಸ ಬಳಿ ದಕ್ಷಿಣಾಭಿಮುಖವಾಗಿ ನಿರ್ಮಿಸಲಾಗಿದೆ. ಲಾಲಶಾವಲಿಯವರು ಸುಮಾರು ೧೭ನೇ ಶತಮಾನದಲ್ಲಿ ತಮ್ಮ ಗುರುಗಳಾದ ಜುಮ್ಮಾ ಶಾವಲಿಯವರನ್ನು ಭೇಟಿ ಮಾಡಲು ಬೆಳಗಾವಿಗೆ ಬಂದರು. ಅವರು ಜುಮ್ಮಾ ಶಾವಲಿವರ ಮಾರ್ಗದರ್ಶನದಲ್ಲಿ ಜ್ಞಾನ ಪಡೆದುಕೊಂಡು ಇಲ್ಲಿ ಒಂದು ಖಾನಕಾ (ಶಿಕ್ಷಣಕೇಂದ್ರ) ವನ್ನು ಸ್ಥಾಪಿಸಿಕೊಂಡು ಧರ್ಮ ಭೋಧನೆಯನ್ನು ಮುಂದುವರೆಸಿದರು. ಲಾಲಾಶಾವರು ಜುಮ್ಮಾ ಶಾವಲಿಯವರ ಆಸ್ಥಾನದಲ್ಲಿ ಸೇವೆಯನ್ನು ಮಾಡುತ್ತಾ ಇಲ್ಲಿಯೇ ಅಸುನೀಗಿದರು. ಇವರ ಸ್ಥಾಪಿಸಿದ ಶಿಕ್ಷಣ ಕೇಂದ್ರ ಈಗಲೂ ಅವರ ಅನುಯಾಯಿಗಳ ಮುಂದುವರೆಸಿಕೊಂಡು ಬಂದಿದ್ದಾರೆ. ಈ ಶಿಕ್ಷಣ ಕೆಂದ್ರದ ಹೆಸರು ಖ್ವಾಜಾ ಗರೀಬ ನವಾಜ ಅರಬ್ಬಿ ಮದರಸಾ ಇಲ್ಲಿ ಸುಮಾರು ೨೫ ವಿದ್ಯಾರ್ಥಿಗಳು ಅಧ್ಯಯನ ಕೈಕೊಳ್ಳುತ್ತಿದ್ದಾರೆ. ಇಲ್ಲಿ ಅರಬ್ಬಿ, ಉರ್ದು, ಕನ್ನಡ ಭಾಷೆಗಳನ್ನು, ಮತ್ತು ಕುರ್-ಆನ್, ಹದೀಸ ಹಾಗೂ ವ್ಯವಹಾರಿಕ ಜೀವನ ಶಿಕ್ಷಣವನ್ನು ನೀಡುತ್ತಾರೆ. ಲಾಲಶಾವರ ಉರುಸು ಪ್ರತಿವರ್ಷ ರಬ್ಬಿಲಾವಲಿ ೧೨ ಮಹಮ್ಮದ ಪೈಗಂಬರ ಜಯಂತಿ ದಿನ ಆಚರಿಸಲಾಗುತ್ತದೆ.[೧೮]

ಈ ದರ್ಗಾವನ್ನು ಸಾಧಾರಣವಾದ ತೆರೆದ ಮಂಟಪದಲ್ಲಿ ವಿಶಾಲವಾದ ಪ್ರಾಕಾರದೊಳಗೆ ಚಿಕ್ಕ ಜಗತಿಯ ಮೇಲೆ ಸಮಾಧಿಯನ್ನು ನಿರ್ಮಿಸಲಾಗಿದೆ. ರಕ್ಷಣಾ ದೃಷ್ಟಿಯಿಂದ ಸಮಾಧಿಯ ಸುತ್ತಲೂ ಚಿಕ್ಕ ಗಾತ್ರದ ಕಟ್ಟಡವನ್ನು ನಿರ್ಮಿಸಲಾಗಿದೆ. ಇವರ ಮೂಲದ ಬಗ್ಗೆ ಪೂರ್ಣವಾದ ಮಾಹಿತಿ ದೊರೆಯುದಿಲ್ಲ, ಅವರ ಅನುಯಾಯಿಗಳಿಂದ ಈ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ.

## ಜುಮ್ಮಾ ಶಾವಲಿ ಬಾಬಾ ಉರ್ಪ ಪಂಜಿಬಾಬಾ

ಜುಮ್ಮಾ ಶಾವಲಿಯವರ ದರ್ಗಾವು ಪಂಜಿಗಲ್ಲಿಯಲ್ಲಿದೆ. ಇವರ ಮೂಲತಹ ಇರಾನದಿಂದ ಬಂದವರೆಂದು ಹೇಳಲಾಗುತ್ತದೆ. ಇವರ ಕಾಲ ಸುಮಾರು ಕ್ರಿ.ಶ.೧೬೯೧-೧೮೪೮ ಎಂದು ಮುಜಾವರ ನೀಡಿದ ಮಾಹಿತಿಯಿಂದ ತಿಳಿಯಬಹುದಾಗಿದೆ. ಧರ್ಮ ಪ್ರಚಾರ ನಿಮಿತ್ಯ ಬೆಳಗಾವಿಗೆ ಬಂದ ತಮ್ಮ ಶಿಷ್ಯರಾದ ಲಾಲಶಾವರ ಜೊತೆಗೂಡಿ ಒಂದು ಧಾರ್ಮಿಕ ಅರಬ್ಬಿ ಶಿಕ್ಷಣ ಕೇಂದ್ರವನ್ನು ಸ್ಥಾಪಿಸಿದರು. ಈ ಶಿಕ್ಷಣದ ಕೇಂದ್ರದ ಮೂಲಕ ಹಲವು ವಿದ್ಯಾರ್ಥಿಗಳಿಗೆ ಮುಸ್ಲಿಂ ಧರ್ಮದ ಮಹತ್ವವನ್ನು ತಿಳಿಸಿ ಹಲವು ಶಿಷ್ಯರ ಬಳಗವನ್ನು ಬೆಳಗಾವಿ ನಗರದಲ್ಲಿ ಹೊಂದಿದ್ದರು. ಇವರು ಕೂಡಾ ಬೆಳಗಾವಿ ನಗರದಲ್ಲಿ ಅಸುನೀಗಿದರು. ಇವರ ಸಮಾಧಿಯನ್ನು ನಿನಾಲು ನೆಲಸುತ್ತಿದ್ದ ಈಗಿನ ಪಂಜಿಗಲ್ಲಿಯಲ್ಲಿ ಸಮಾಧಿ ಮಾಡಲಾಯಿತು. ಈಗಲೂ ಕೂಡಾ

ಆ ಭಾಗವನ್ನು ಅವರ ಹೆಸರಿನಿಂದಲೇ ಕರೆಯುತ್ತಾರೆ. ಇವರ ಸಮಾಧಿಯನ್ನು ಅತಿ ಸರಳವಾಗಿ ನಾಲ್ಕು ಸ್ತಂಭಗಳ ಮಧ್ಯೆ ರಕ್ಷಣಾ ರೂಪದಲ್ಲಿ ತೆರದ ಆವರಣದಲ್ಲಿ ನಿರ್ಮಿಸಲಾಗಿದೆ.[೧೯]

**ಪೀರ್ ಸಿಕ್ಕಂದರ ಶಾವಲಿ ದರ್ಗಾ**

ಪೀರ್ ಸಿಕ್ಕಂದರ ಶಾವಲಿ ದರ್ಗಾವು ಕೋಟೆಯ ಒಳಭಾಗದಲ್ಲಿ ಅಸದಖಾನ ಮಹಲ್‌ನ ಎದುರಿಗೆ ತೆರದ ಆವರಣ ಪ್ರದೇಶದಲ್ಲಿ ಇವರ ಸಮಾಧಿಯನ್ನು ನಿರ್ಮಿಸಲಾಗಿದೆ. ಇವರ ಸಮಾಧಿ ಪಕ್ಕದಲ್ಲಿ ಶಿಷ್ಯರ ಸಮಾಧಿಗಳನ್ನು ಮಾಡಲಾಗಿದೆ. ಇವರ ಉರುಸು ಏಪ್ರಿಲ್ ೧೦ ರಂದು ಆಚರಿಸಲಾಗುತ್ತದೆ. ಈ ದರ್ಗಾಕ್ಕೆ ಬೆಳಗಾವಿ ನಗರದ ಜನ ಭೇಟಿ ನೀಡುತ್ತಾರೆ. ಇವರು ಬದ್ರುದ್ಧೀನ ಚಿಸ್ತಿಯವರ ಸಮಕಾಲೀನವರು ಎಂದು ಸ್ಥಳೀಯರ ಅಭಿಪ್ರಾಯವಾಗಿದೆ. ಇಲ್ಲಿ ಯಾವುದೇ ಕಟ್ಟಡ ಅವಶೇಷ ವಾಸ್ತುಗಳು ದೊರೆಯುದಿಲ್ಲ.

**ಹಜರತ ಸಯ್ಯದ ಮಿರ ಶಾವಲಿ ಮತ್ತು ಮಹತಾಜ ಬೇಗಂ ರಹಮತ ಉಲ್ಲಾ**

ಈ ದರ್ಗಾವು ನಗರ ಕೇಂದ್ರ ಸಾರಿಗೆ ಬಸ್ ನಿಲ್ದಾನದ ಎದುರಿಗೆ ಮುಖ್ಯ ರಸ್ತೆಯ ಬದಿಯಲ್ಲಿ ನಿರ್ಮಿಸಲಾಗಿದೆ. ಈ ದರ್ಗಾದಲ್ಲಿ ಮಿರಶಾವಲಿ ಮತ್ತು ಅವರ ಶ್ರೀಮತಿಯಾದ ಮಹತಾಜ ಬೇಗಂ ಅವರ ಸಮಾಧಿಯನ್ನು ಮಾಡಲಾಗಿದೆ. ಈ ದರ್ಗಾವನ್ನು ಇತ್ತೀಚಿನ ವಾಸ್ತುವನ್ನು ಅನುಸರಿಸಿ ನಿರ್ಮಿಸಲಾಗಿದೆ. ಪ್ರತಿವರ್ಷ ಶಹಬಾನ ೨೦ ರಂದು ಉರುಸು ಆಚರಿಸಲಾಗುತ್ತದೆ.

**ದಾದಾ ಪೀರ ಸಾಬರ ದರ್ಗಾ**

ದಾದ ಪೀರ ಸಾಬರ ದರ್ಗಾವು ಕೋಟೆಯ ಒಳ ಆವರಣದಲ್ಲಿ ನಿರ್ಮಿಸಲಾಗಿದೆ. ದಾದ ಪೀರ ಸಾಬರು ಆದಿಲ್ ಶಾಹಿಗಳ ಆಡಳಿತದಲ್ಲಿ ಒಬ್ಬ ಶ್ರೇಷ್ಠ ವಿದ್ವಾಂಸರಾಗಿದ್ದರು. ಇವರು ಅಸದಖಾನನ ಸಮಕಾಲೀನ ವ್ಯಕ್ತಿ ಎನ್ನಲಾಗಿದೆ. ಇವರ ಉರುಸನ್ನು ಪ್ರತಿವರ್ಷ ರಮಜಾನ ತಿಂಗಳ ೧೨ರಂದು ಆಚರಿಸಲಾಗುತ್ತದೆ. ಇವರ ದರ್ಗಾವನ್ನು ತೆರೆದ ಒಂದು ಮಂಟಪದಲ್ಲಿ ನಿರ್ಮಿಸಲಾಗಿದೆ.[೨೦]

**ಅಬ್ದುಲ್ ರೆಹಮಾನಖಾನ ರೆಹಮತವುಲ್ಲಾ ಅಲೈ ಶೇರಖಾನ್**

ಶೇರಖಾನರ ದರ್ಗಾವು ನಗರದ ಬಂಜರ ಗಲ್ಲಿಯಲ್ಲಿದೆ. ಇವರ ಪೂರ್ಣ ಹೆಸರು ಅಬ್ದುಲ್ ರೆಹಮಾನಖಾನ್ ರೆಹಮತವುಲ್ಲಾ ಅಲೈ. "ಶೇರಖಾನ" ಎಂಬುದು ಆದಿಲ್‌ಶಾಹಿಗಳು ನೀಡಿದ ಬಿರುದು. ಈತ ಬೆಳಗಾವಿ ನಗರದ ಗವರ್ನರನಾಗಿ ಕ್ರಿ ಶ ೧೫೫೦ರಲ್ಲಿ ನೇಮಕಗೊಂಡ

ನಂತರ ಅಸದಖಾನ ಹತ್ಯೆಯ ದಂಗೆಯನ್ನು ದಮನ ಮಾಡಿ ಶಿಸ್ತುಬದ್ಧವಾದ ಆಡಳಿತವನ್ನು ನಡೆಸಿದನು. ಸಮಾಜದಲ್ಲಿ ಶಾಂತಿ ಸಹಬಾಳ್ವೆ ಸಾಮರಸ್ಯದಿಂದ ಆಳ್ವಿಕೆ ಮಾಡಿ ಬೆಳಗಾವಿ ನಗರದ ಏಳ್ಗಿಗೆ ಕಾರಣನಾದನು. ಈತ ಬೆಳಗಾವಿ ಹೊರವಲಯದಲ್ಲಿ ಒಂದು ವ್ಯವಸ್ಥಿತವಾದ ಮುತ್ತು ರತ್ನಗಳ ವ್ಯಾಪಾರ ಕೇಂದ್ರವನ್ನು ಶಹಪೇಟ ಎಂಬ ಹಳ್ಳಿಯಲ್ಲಿ ಸ್ಥಾಪಿಸಿ ಅದಕ್ಕೆ ಭದ್ರವಾದ ಕೋಟೆಯನ್ನು ನಿರ್ಮಿಸಿದನು. ಆ ನಗರಕ್ಕೆ ಈತನ ಹೆಸರಿನಿಂದಲೇ ಕರೆಯಲಾಗಿದೆ. ಶಹಪೂರ ಸುತ್ತಮುತ್ತಲು ರೇಷ್ಮೆ ಕೈಗಾರಿಕೆ ಉದ್ಯಮಗಳನ್ನು ಪ್ರಾರಂಭಿಸಿ ಬೃಹತ್ ವಾಣಿಜ್ಯ ಕೇಂದ್ರವಾಗಿಸಿದ. ಶಹಪೂರ  ಭಾಗವು ಬೆಳಗಾವಿ ಉಪ ನಗರವಾಗಿ ರೂಪಿಸಿದನು.[೨೧]

ಅಷ್ಟೆಲ್ಲದೆ ಬೆಳಗಾವಿ ನಗರದಲ್ಲಿ ಐದು ಮಸೀದಿಗಳನ್ನು ಮತ್ತು ಆಡಳಿತ ಕೇಂದ್ರ ಕಛೇರಿಗಳನ್ನು ಸ್ಥಾಪಿಸಿದನು. ಅವುಗಳಲ್ಲಿ ಪ್ರಮುಖವಾಗಿ ದರ್ಬಾರ ಗಲ್ಲಿಯ ಜುಮ್ಮಾ ಮಸೀದಿ, ಶಹಾಪುರದಲ್ಲಿಯ ಶೇರಖಾನ ಮಸೀದಿ, ಕೋಟೆ ಒಳಭಾಗದಲ್ಲಿಯ ಜಾಮೀಯ ಮಸೀದಿ ಹಾಗು ದರ್ಬಾರ ಕೊಠಡಿಯನ್ನು ಈತನೇ ನಿರ್ಮಿಸಿದನು ಎಂದು ಸ್ಥಳೀಯರು ಹೇಳುತ್ತಾರೆ. ಶೇರಖಾನ ಒಬ್ಬ ಶ್ರೇಷ್ಠ ಆಡಳಿತಗಾರನಾಗಿ ಸಮಾಜ ಸುಧಾರಕನಾಗಿ ಆಡಳಿತನಿರ್ವಹಿಸಿ ಬೆಳಗಾವಿ ಜನರ ಮನದಲ್ಲಿ ಶಾಶ್ವತವಾದ ಸ್ಥಾನ ಪಡೆದುಕೊಂಡಿದ್ದಾನೆ. ಈತನ ಮೂಲ ಮತ್ತು ಅಂತ್ಯದ ಬಗ್ಗೆ ಮಾಹಿತಿ ದೊರೆವುದಿಲ್ಲ. ಈತನ ದರ್ಗಾವನ್ನು ಬಿಜಾಪುರ ವಾಸ್ತುಶೈಲಿಯನ್ನು ಬಳಸಿ ನಿರ್ಮಿಸಲಾಗಿದೆ. ಈಗ ದರ್ಗಾವು ಪ್ರಾಕೃತಿಕ ವಿಕೋಪದಿಂದ ವಿನಾಶದ ಅಂಚಿನಲ್ಲಿದೆ. ಪೂರ್ವ ಭಾಗಕ್ಕೆ ಅಭಿಮುಖಮಾಡಿ ಎತ್ತರವಾದ ಜಗತಿಯ ಮೇಲೆ ನಿರ್ಮಿಸಲಾಗಿದೆ. ದ್ವಾರ ಬಾಗಿಲು ಚಿಕ್ಕ ಕಮಾನಿನಾಕಾರವಿದ್ದು ಮೇಲಿನ ಅಂತಸ್ತಿನ ಭಾಗ ಬಿದ್ದು ಹೋಗಿದೆ. ಗರ್ಭಾಂಕರಣದ ಮೇಲಿನ ಚಚ್ಚ ಗುಮ್ಮಟ ಭಾಗವು ಬಿದ್ದು ಹೋಗಿದೆ. ಈ ಗರ್ಭಾಂಕಣದ ಒಳಗಡೆ ಚತುಷ್ಕೇಂದ್ರಿತ ಕಮಾನುಗಳನ್ನು  ನಿರ್ಮಿಸಲಾಗಿದೆ. ಅಲಂಕಾರಿಕವಾಗಿ ತೂಗದೀಪಗಳನ್ನು ಅಳವಡಿಸಲಾಗಿದೆ. ದರ್ಗಾದ ಒಳಭಾಗವು ಕಲೆಯ ದೃಷ್ಟಿಯಿಂದ ಆಕರ್ಷಿನಿಯವಾಗಿದ್ದರು ಅದು ವಿನಾಶದ ಅಂಚಿನಲ್ಲಿದೆ, ಈ ದರ್ಗಾದ ಉರುಸುನ್ನು ಪ್ರತಿವರ್ಷ ಶಹಬಾನ ೧೭ ರಂದು  ಆಚರಿಲಾಗುತ್ತದೆ.

## ಸಯ್ಯದ ಅಮೀನ ಶಾ ಬುಕಾರಿ ದರ್ಗಾ

ಇವರ ದರ್ಗಾವು ಬುಕಾರಿ ಗಲ್ಲಿಯಲ್ಲಿದೆ. ಇವರ ಪೂರ್ಣ ಹೆಸರು ಸಯ್ಯದ ಅಮೀನ ಶಾ ಬುಕಾರಿ ರಹಮತ ವುಲ್ಲಾ ಅಲೈ. ಅಮಿನ ಶಾ ಬುಕಾರಿಯವರು ಅಸದಖಾನ ಗುರುಗಳಾದ ಹಸನ ಬುಕಾರಿಯವರ ಸಹೋದರ. ಬುಕಾರಿ ಮನೆತನದ ಮೂಲ ಪುರುಷ ಸೈಪುವುದ್ದಿನ್ ಬುಕಾರಿಯವರು ಬೆಳಗಾವಿ ನಗರದ ಅಮೀರ(ಕೊತ್ವಾಲ)ನಾಗಿದ್ದು ಅಸದಖಾನಕ್ಕಿಂತ ಮುಂಚಿತವಾಗಿ

ಈ ಭಾಗದಲ್ಲಿ ಅಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದರು. ಇವರ ಉರುಸು ಹಿಜರಿ ಶಕೆ ಪ್ರಕಾರ ಪ್ರತಿವರ್ಷ ಶಹಬಾನ ೨೩ರಂದು ಆಚರಿಸಲಾಗುತ್ತದೆ. ಇವರ ಮೂಲದ ಬಗ್ಗೆ ಯಾವುದೇ ಮಾಹಿತಿ ದೊರೆವುದಿಲ್ಲ.[೨೨]

ಇವರ ದರ್ಗಾವನ್ನು ಸಾಮಾನ್ಯವಾದ ವಾಸ್ತುಶೈಲಿಯನ್ನು ಅನುಸರಿಸಿ ನಿರ್ಮಿಸಲಾಗಿದೆ. ದರ್ಗಾವನ್ನು ಚಿಕ್ಕ ಜಗತಿಯ ಮೇಲೆ ಚರ್ತುಮುಖವಾಗಿ ಗೋಡೆಯನ್ನು ನಿರ್ಮಿಸಲಾಗಿದೆ. ಗೋಡೆಯಲ್ಲಿ ಚಿಕ್ಕದಾದ ಮಿನಾರಗಳ ಅಳವಡಿಸಲಾಗಿದೆ. ಸಮಾಧಿಯ ರಕ್ಷಣೆಗೆ ನಾಲ್ಕು ಮೂಲೆಗಳಲ್ಲಿ ಸ್ತಂಭಗಳನ್ನು ಅಳವಡಿಸಲಾಗಿದೆ.

### ಶಾಸುದ್ಧೀನ ಅನ್ಸಾರಿ ಉರ್ಫ ಜಂಗಲಿ ಪೀರ ದರ್ಗಾ

ಶಾಸುದ್ದೀನ ಅನ್ಸಾರಿಯವರ ದರ್ಗಾವು ಬೆಳಗಾವಿಯಿಂದ ೬ ಕಿ.ಮೀ ಅಂತರದ ಪೀರನ ವಾಡಿಯಲ್ಲಿ ಕಾಣಬಹುದು. ಅನ್ಸಾರಿಯವರು ಒಬ್ಬ ಪೀರ್‌ರಾಗಿದ್ದರು. ಅವರು ಈ ಭಾಗದಲ್ಲಿ ನೆಲಸಿದ ಕಾರಣ ಈ ಪ್ರದೇಶಕ್ಕೆ ಪೀರನವಾಡಿ ಎಂದು ಕರೆಯಲಾಗುತ್ತದೆ. ಈ ಸಂತರು ಯಾವಾಗಲು ದಟ್ಟವಾದ ಅರಣ್ಯದಲ್ಲಿ ನೆಲಸುತ್ತಿದ್ದರಿಂದ ಇವರನ್ನು ಜನಸಾಮಾನ್ಯರು ಜಂಗಲಪೀರ್ ಎಂದು ಅಡ್ಡನಾಮದಿಂದ ಕರೆಯುತ್ತಿದ್ದರು. ಇವರು ಶಾಂತ ಸ್ವಭಾವದ ವ್ಯಕ್ತಿ ಸದಾ ಜ್ಞಾನದಲ್ಲಿ ನಿರತರಾಗಿರುತ್ತಿದ್ದರು. ತಮ್ಮ ಬಳಿಗೆ ಬಂದಂತಹ ಭಕ್ತರಿಗೆ ಸೂಕ್ತವಾದ ಮಾರ್ಗದರ್ಶನ ನೀಡಿ ಅವರ ಕಷ್ಟಗಳನ್ನು ಪರಿಹರಿಸುತ್ತಿದ್ದರು. ಇವರ ಜೊತೆ ಇನ್ನೂ ಕೆಲವು ಸಂತರು ಬೆಳಗಾವಿಗೆ ಬಂದು ನೆಲೆಸಿದರು. ಅವರಲ್ಲಿ ಪ್ರಮುಖವಾಗಿ ಹಜರತ್ ಸಯ್ಯದ ದಾದಾ ಗೈಬಿ ಪೀರ ಹಾಗೂ ಹಜರತ್ ಸಯ್ಯದ್ ನಿಜಾಮುದ್ದೀನ ಇನ್ನು ಹಲವು ಸಂತರು ಧರ್ಮ ಪ್ರಚಾರ ನಿಮಿತ್ಯ ಬೆಳಗಾವಿಗೆ ಬಂದು ನೆಲೆಸಿದರು.

ಅನ್ಸಾರಿಯವರ ಉರುಸನ್ನು ಪ್ರತಿವರ್ಷ ಫೆಬ್ರುವರಿ ಮೊದಲನೆಯ ವಾರದಲ್ಲಿ ಆಚರಿಸಲಾಗುತ್ತದೆ. ಈ ಹಬ್ಬವನ್ನು ಏಳು ದಿನಗಳ ಕಾಲ ಸಂಭ್ರಮದಿಂದ ಆಚರಿಸುತ್ತಾರೆ. ಈ ಸಂತರ ಉತ್ಸವದಲ್ಲಿ ಕವಾಲಿಕಟ್ಟಾ ಹಾಗೂ ಕುಸ್ತಿ ಸ್ಪರ್ಧೆಗಳನ್ನು ಏರ್ಪಡಿಸಲಾಗುತ್ತದೆ. ಅನ್ಸಾರಿ ದರ್ಗಾವನ್ನು ವಿಶಾಲವಾದ ಆವರಣದಲ್ಲಿ ನಿರ್ಮಿಸಲಾಗಿದೆ. ಈ ದರ್ಗಾದ ಪೂರ್ವ ಮತ್ತು ಪಶ್ಚಿಮಕ್ಕೆ ಎರಡು ದ್ವಾರಗಳಿದ್ದು, ದರ್ಗಾವನ್ನು ತೆರೆದ ಮಂಟಪದಲ್ಲಿ ನೆಲ ಹಾಸಿಗೆ ಮೇಲೆ ನಿರ್ಮಿಸಲಾಗಿದೆ. ಈ ದರ್ಗಾಕ್ಕೆ ಸುತ್ತಮುತ್ತಲಿನ ಗ್ರಾಮಸ್ಥರು ಭೇಟಿ ನೀಡುತ್ತಾರೆ.[೨೩]

### ಹಜರತ್ ಸಯ್ಯದ ನಿಜಾಮುಧ್ಧಿನ ಔಲಿಯಾ ದರ್ಗಾ

ನಿಜಾಮುಧ್ಧೀನ ಔಲಿಯಾವರ ದರ್ಗಾವು ವಡಗಾಂವ ಗ್ರಾಮದ ನಿಜಾಂ ಚೌಕ ಬಳಿ ಇದೆ. ಈ ದರ್ಗಾವನ್ನು ವಿಶಾಲವಾದ ಆವರಣದಲ್ಲಿ ಇತ್ತೀಚಿನ ಆಧುನಿಕ ಶೈಲಿಯಲ್ಲಿ

ನಿರ್ಮಿಸಲಾಗಿದೆ. ಈ ದರ್ಗಾವನ್ನು ನೆಲ ಹಾಸಿಗೆಗಿಂತ ಕೆಳ ಮಟ್ಟದಲ್ಲಿ ಗರ್ಭಾಂಕಣವನ್ನು ರಚಿಸಲಾಗಿದೆ. ಗರ್ಭಾಂಕಣದ ರಕ್ಷಣೆಗಾಗಿ ಸಮಾಧಿಯ ಸುತ್ತಲೂ ನಾಲ್ಕು ಭಾಗಗಳಲ್ಲಿ ಸ್ತಂಭಗಳನ್ನು ರಚಿಸಲಾಗಿದೆ. ಹಾಗೂ ಇತ್ತೀಚಿನ ಆಧುನಿಕ ಶೈಲಿಯನ್ನು ಬಳಸಿ ದರ್ಗಾವನ್ನು ಆಕರ್ಷಿಸುವಂತೆ ರಚಿಸಲಾಗಿದೆ. ಹೊರಭಾಗದಲ್ಲಿ ಪ್ರದಕ್ಷಿಣಾ ಪಥಕ್ಕೆ ಅವಕಾಶವಿದೆ. ಇವರ ದರ್ಗಾದ ಸುತ್ತಲೂ ಹಲವು ಸಂತರ ಸಮಾಧಿಗಳಿವೆ. ಹಾಗು ಖಬರಸ್ತಾನ ಭಾಗವು ಇಲ್ಲಿ ಇದೆ. ಇಲ್ಲಿ ಪರ್ಶಿಯನ್ ಭಾಷೆಯ ಶಾಸನ ದೊರೆತಿದೆ. ದರ್ಗಾದ ಸ್ವಲ್ಪ ಅಂತರದಲ್ಲಿ ಒಂದು ಮಸೀದಿಯನ್ನು ನಿರ್ಮಿಸಲಾಗಿದೆ.

ಹೀಗೆ ಇನ್ನೂ ಬೆಳಗಾವಿ ನಗರದಲ್ಲಿ ಸರಿಸುಮಾರು ಹತ್ತಕ್ಕಿಂತ ಹೆಚ್ಚು ದರ್ಗಾಗಳನ್ನು ಕಾಣಬಹುದು. ಅವುಗಳಲ್ಲಿ ಪ್ರಮುಖವಾದ ಸಂತರ ದರ್ಗಾಗಳ ಕುರಿತು ನನ್ನ ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಗಳನ್ನು ಸಂಕ್ಷೇಪಿಸಿ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಮಸೀದಿಗಳು**

ಇಸ್ಲಾಂ ಧರ್ಮ ಸ್ಥಾಪಕರು ಅರೇಬಿಯಾದ ಮದೀನಾದಲ್ಲಿ ವಾಸಿಸುತ್ತಿದ್ದ ಮನೆಯ ವಿಸ್ತೃತ ರೂಪವೇ ಮಸೀದಿಯ ಕಲ್ಪನೆಯ ಮೂಲ ಅಭಿಪ್ರಾಯವುಂಟು.[೨೪] ಪ್ರಾರ್ಥನೆಗೊಸ್ಕರ ನಿರ್ಮಿಸಿದ ಕಟ್ಟಡಗಳನ್ನು ಮಸೀದಿಗಳೆಂದು ಕರೆಯಲಾಗುತ್ತದೆ. ಕೆಲವು ಸಲ ವಿಶೇಷವಾಗಿ ಧಾರ್ಮಿಕ ಆಚರಣೆಗಳಿಗೊಸ್ಕರ ಮಸೀದಿಗಳನ್ನು ಬಳಸಿಕೊಳ್ಳಲಾಗುತ್ತದೆ. ಬೆಳಗಾವಿ ನಗರದಲ್ಲಿ ಸುಮಾರು ಒಂದು ನೂರರವರೆಗೆ ಮಸೀದಿಗಳನ್ನು ಕಾಣಬಹುದು. ಅವುಗಳನ್ನು ವಿಭಿನ್ನ ವಾಸ್ತುಶೈಲಿಗಳಲ್ಲಿ ನಿರ್ಮಿಸಲಾಗಿದೆ. ಮಸೀದಿಗಳು ಪ್ರಾರ್ಥನಾ ಮಂದಿರಗಳಾಗಿದ್ದು ಅವುಗಳ ರಚನೆಯ ಮುಖ್ಯ ಲಕ್ಷಣವೆಂದರೆ ಕಂಬಗಳಿಂದ ಕೂಡಿದ ಕೈಸಾಲೆಯಿಂದ ಸುತ್ತುವರೆಯಲ್ಪಟ್ಟ ವಿಶಾಲವಾದ ಒಳ ಅಂಗಣವಿರುತ್ತದೆ. ಮನೆಯಲ್ಲಿ ಕೇಂದ್ರಿಕೃತ ದಿಕ್ಕನ್ನು ಗುರುತಿಸುವುದಕ್ಕಾಗಿ ಮೆಕ್ಕಾದ ಪಶ್ಚಿಮ ಕಡೆಗೆ ಇರುವ ಗೋಡೆಯನ್ನು ವಿಸ್ತರಿಸಿ ಅದನ್ನು ಕಂಬಗಳಿಂದ ಕೂಡಿದ ಮಂಟಪದ ರೂಪವಾಗಿ ಮಾರ್ಪಡಿಸಲಾಗಿದೆ. ಈ ಮಂಟಪದ ಮನೆಯಲ್ಲಿ ಗೋಡೆ ಮತ್ತು ಅದರಲ್ಲಿ ಕಮಾನುಗೂಡ ನಿರ್ಮಿತವಾಗಿರುತ್ತದೆ. ಪ್ರಾರ್ಥನೆ ದಿಕ್ಕನ್ನು ಸೂಚಿಸಲು ಸಹಾಯಕವಾದ ಇದಕ್ಕೆ (ಮೆಹರಬ್) ಎಂದು ಕರೆಯುತ್ತಾರೆ.[೨೫] ಈ ಮೆಹರಬ್‌ದ ಬಲಗಡೆಯಲ್ಲಿ(ಮಿಂಬರ್) ಎನ್ನುವ ಎತ್ತರವಾದ ಉಪದೇಶದ ವೇದಿಕೆ ಹೊಂದಿರುತ್ತದೆ.

ಮಂಟಪದ ಸ್ವಲ್ಪ ಭಾಗಕ್ಕೆ ಪರದೆ ಹಾಕಿ ಮುಸ್ಲಿಂ ಸ್ತ್ರೀಯರು ನಮಾಜ್ ಮಾಡಲು ಅವಕಾಶ ಕಲ್ಪಿಸಿಕೊಡುವ ವ್ಯವಸ್ಥೆ ಇರುತ್ತದೆ. ಮಸೀದಿಯ ಮಂಟಪದ ಮುಂಭಾಗದಲ್ಲಿ ಎತ್ತರವಾದ ವೇದಿಕೆಯಿದ್ದು ಅದರ ಮೇಲೆ ನಿಂತು ಮುಸ್ಲಿಂ ವರ್ಗದವರನ್ನು ನಮಾಜ(ಪ್ರಾರ್ಥನೆ)ಗೆ

ಬರುವಂತೆ ಎಚ್ಚರಿಸುವ ರೀತಿಯಲ್ಲಿ ಅಜಾನ್ ಕೊಡುವ ವ್ಯವಸ್ಥೆ ಬೆಳೆದು ಬಂದಿದೆ. ಮುಂದೆ ಅದು ಮಿನಾರಗಳ ಬೆಳವಣಿಗೆಗೆ ಕಾರಣವಾಯಿತು. ಪ್ರಾರ್ಥನೆಗಿಂತ ಮುಂಚಿತವಾಗಿ(ವಜು) ಅಂದರೆ ಸ್ವಚ್ಛಗೊಳಿಸಿಕೊಳ್ಳಲು ನೀರಿನ ಕೊಳದ ವ್ಯವಸ್ಥೆ ಇರುತ್ತದೆ. ಮಸೀದಿಗೆ ಗಾಂಭಿರ್ಯವುಂಟು ಮಾಡುವ ದಿಶೆಯಲ್ಲಿ ಆಕರ್ಷಕವಾದ ಮುಖದ್ವಾರ ಹಾಗೂ ಮೆಹರಬ್ ಮೇಲೆ ಬೃಹದಾಕಾರದ ಗೋಪುರ ಅದರ ಮೇಲೆ ಅರ್ಧಚಂದ್ರ ಮುಂತಾದವುಗಳು ಕ್ರಮೇಣವಾಗಿ ಬೆಳೆದು ಬಂದಿದರ ಒಟ್ಟು ನಿರೂಪಣೆಯಾಗಿದೆ. ಮಸೀದಿಯ ನಿರ್ವಹಣೆಗೆ ತಮ್ಮ ಭಾಂದವರಿಗೆ ಜವಾಬ್ದಾರಿತ ಕೆಲಸವನ್ನು ನೀಡಲಾಗಿರುತ್ತದೆ. ಮುತವಲಿ ಎಂಬುವರು ಕುತ್ಬಾ (ಪ್ರಾರ್ಥನೆ) ಹೇಳುವವರು. ಇಮಾಮ ದಿನಾಲು ಐದು ಬಾರಿ ಪ್ರಾರ್ಥನೆ ನಡೆಸಿಕೊಡುವ ವ್ಯಕ್ತಿ ಇನ್ನೂ ಗವಾಸ ಎಂಬ ಸೇವಕರು ಮಸೀದಿಗಳಲ್ಲಿ ಸೇವೆ ಸಲ್ಲಿಸುತ್ತಾರೆ. ಅವುಗಳಲ್ಲಿ ಪ್ರಮುಖವಾಗಿ ಮುಸ್ಲಿಂ ಆಡಳಿತಗಾರರ ಅವಧಿಯಲ್ಲಿ ನಿರ್ಮಾಣವಾದಂತಹ ಮಸೀದಿಗಳ ಇತಿಹಾಸ, ರಚನಾ ಶೈಲಿ, ಅವುಗಳ ಸ್ಥಿತಿಗತಿ ಕುರಿತು ವಿವರಿಸಲಾಗಿದೆ.

**ಸಫಾ ಈ ಮಸೀದಿ**

ಬೆಳಗಾವಿ ನಗರದ ಮುಖ್ಯ ಕೋಟೆ ಆವರಣದಲ್ಲಿ ಪೂರ್ವಾಭಿಮುಖವಾಗಿ ಈ ಮಸೀದಿಯನ್ನು ನಿರ್ಮಿಸಲಾಗಿದೆ. ಈ ಮಸೀದಿಯನ್ನು ಆದಿಲ್‌ಶಾಹಿಗಳ ಪ್ರಮುಖ ಸರದಾರನಾದ ಅಸದ್‌ಖಾನ ಕ್ರಿ.ಶ. ೧೫೧೮ರಲ್ಲಿ ನಿರ್ಮಿಸಿದ ಎಂದು ಇಲ್ಲಿ ದೊರೆತ ಎರಡು ಪರ್ಶಿಯನ್ ಶಾಸನಗಳಿಂದ ತಿಳಿಯಬಹುದಾಗಿದೆ. ಈ ಮಸೀದಿಯನ್ನು ಮೊಘಲ್ ಹಾಗೂ ದಖ್ಖನ್ ಶೈಲಿಯಲ್ಲಿ ಬೃಹತ್ತಾದ ಗುಮ್ಮಟ ಮತ್ತು ಕಮಾನುಗಳನ್ನು ಅಳವಡಿಸಿ ನಿರ್ಮಿಸಲಾಗಿದೆ.[೨೬] ಕೋಟೆಯಲ್ಲಿರುವ ಯೋಧರ ಪ್ರಾರ್ಥನೆಗೆ ಅನುಕೂಲವಾಗುವ ದೃಷ್ಟಿಯಿಂದ ಈ ಮಸೀದಿಯನ್ನು ಅಸದಖಾನ್‌ನು ಖಾದರಿ ನಿಜಾಂ ಮದ್ವಾನಿಯವರ ಪ್ರೇರಣೆಯಿಂದ ಇದನ್ನು ಕಟ್ಟಿಸಿದನು. ಇಲ್ಲಿಯ ಒಂದು ಶಾಸನವು ಹಿಜರಿ ಶಕೆ ಪ್ರಕಾರ ೯೨೪ರಲ್ಲಿ ಕ್ರಿ.ಶ.೧೫೧೮ರಲ್ಲಿ ಈ ಸಫಾ ಮಸೀದಿಗೆ ಅಸದಖಾನ ಅಡಿಪಾಯ ಹಾಕಿಸಿದ ಎಂದು ಈ ಶಾಸನದಿಂದ ತಿಳಿದುಬರುತ್ತದೆ. ಈ ಮಸೀದಿಯಲ್ಲಿರುವ ಇನ್ನೊಂದು ಶಾಸನವು ಹಿಜರಿ ಶಕೆ ಪ್ರಕಾರ ೯೨೫ ರಜಬ್ ೨೧ ರಲ್ಲಿ ಕ್ರಿ.ಶ.೧೫೧೯ ಜುಲೈ ೧೯ರ ಅವಧಿಯಲ್ಲಿ ಈ ಮಸೀದಿಯನ್ನು ಪೂರ್ಣವಾಗಿ ಕಟ್ಟಿಸಿದನೆಂದು ಈ ಶಾಸನ ತಿಳಿಸುತ್ತದೆ.[೨೭] ಮಸೀದಿ ಸಫಾವು ಮೂಲತಃ ಶೈವಾಲಯವಾಗಿದ್ದು ಇದನ್ನು ಅಸದಖಾನ ಮಸೀದಿಯಾಗಿ ಮಾರ್ಪಡಿಸಿದ ಎಂದು ಸುರೇಬಾನಕರವರು ಅಭಿಪ್ರಾಯ ಪಟ್ಟಿದ್ಧಾರೆ.[೨೮] ಮಸೀದಿ ಸಫಾವು ೮೧ ಅಡಿ ಎತ್ತರ ಮತ್ತು ೫೮ ಅಡಿ ಅಗಲವಿದೆ. ಮಸೀದಿಯಲ್ಲಿರುವ ಸ್ತಂಭಗಳ ಮೇಲೆ ಯಾದವರ ಕಾಲದ ಶಾಸನಗಳನ್ನು ಕೆತ್ತಲಾಗಿದೆ.

ಮಸೀದಿಯ ನಿರ್ವಹಣೆಗಾಗಿ ಅಸದಖಾನ ದಾನದತ್ತಿ ನೀಡಿದ ಉಲ್ಲೇಖವನ್ನು ನಗರದ ಬಾಬುರಾವ ಮನೆಯ ಹಾಸುಗಲ್ಲಿನ ಮೇಲಿನ ಕ್ರಿ.ಶ.೧೫೯೯ರ ಶಾಸನ ತಿಳಿಸುತ್ತದೆ.[೨೯]

ಈ ಮಸೀದಿಯ ಸ್ತಂಭಗಳ ಮೇಲೆ ಕುರ್–ಆನ್‌ನಿಂದ ಆಯ್ದ ಪದ್ಯಗಳನ್ನು ಪರ್ಶಿಯನ್ ಭಾಷೆಗಳಲ್ಲಿ ಅಬು ತಾಲಿಬ್ ಎಂಬ ವ್ಯಕ್ತಿಯ ಸುಂದರವಾದ ಬರವಣಿಗೆ ಕಾಣಬರುತ್ತದೆ. ಸ್ತಂಭಗಳ ಮೇಲೆ ಸೂಕ್ಷ್ಮಕೆತ್ತನೆಯಿಂದ ಕೂಡಿದ ಅಲಂಕಾರಿಕ ಚಿತ್ರಣಗಳನ್ನು ಖಾದ್ರಿ ನಿಜಾಮುದ್ಧೀನ ಎಂಬುವನು ಕೊರೆದಿದ್ದಾನೆ.[೩೦] ಈ ಮಸೀದಿಯ ಅಲಂಕಾರಕ್ಕಾಗಿ ಸುಮಾರು ಎರಡು ನೂರು ಚಿಕ್ಕ ಮಿನಾರಗಳನ್ನು ಮತ್ತು ಗುಮ್ಮಟವನ್ನು, ಕಮನುಗಳನ್ನು ನಿರ್ಮಿಸಲಾಗಿದೆ. ಇಲ್ಲಿಯ ಗೋಲಾಕಾರದ ಕಂಬಗಳು ಹಿಂದೂ–ಮುಸ್ಲಿಂ ಸಮ್ಮಿಶ್ರಣ ಶೈಲಿಯನ್ನು ಪ್ರತಿಬಿಂಬಿಸುತ್ತವೆ. ಈ ಮಸೀದಿಯ ಕಟ್ಟಡದ ಮೇಲೆ ಅಲಂಕಾರಿಕವಾಗಿ ಕಮಾನು ತುರಾಯಿಗಳನ್ನು ಬಳಸಲಾಗಿದೆ. ಗೋಡೆಯ ಮೂಲೆಗಳ ಭಾಗದಲ್ಲಿ ಚಿಕ್ಕ ಮಿನಾರಗಳನ್ನು ಅಳವಡಿಸಲಾಗಿದೆ.[೩೧]

ಈ ಮಸೀದಿಯ ದ್ವಾರಬಾಗಿಲನ್ನು ಹೂವಿನ ಅಲಂಕಾರದಲ್ಲಿ ನಾಜೂಕಾದ ಕೆತ್ತನೆ ಇರುವ ಕಟ್ಟಿಗೆಯ ದ್ವಾರಬಾಗಿಲನ್ನು ಶೇರಖಾನ ಕ್ರಿ.ಶ.೧೫೮೬ರಲ್ಲಿ ನಿರ್ಮಿಸಿದನು.[೩೨]

**ಜಾಮಿಯಾ ಮಸೀದಿ**

ಬೆಳಗಾವಿ ಕೋಟೆಯ ಒಳಭಾಗದಲ್ಲಿ ಈ ಮಸೀದಿಯನ್ನು ಕಾಣಬಹುದು. ಈ ಮಸೀದಿಯನ್ನು ಅತಿ ಸರಳ ಶೈಲಿಯಲ್ಲಿ ಆಕರ್ಷಿಸುವಂತೆ ರಚಿಸಲಾಗಿದೆ. ಶೇರಖಾನ ಸರದಾರನು ಈ ಮಸೀದಿಯನ್ನು ವಿಶಾಲವಾದ ಆವರಣದಲ್ಲಿ ಕ್ರಿ.ಶ.೧೫೮೦–೧೫೮೫ರಲ್ಲಿ ಕಟ್ಟಿಸಿದನೆಂದು ಇಲ್ಲಿಯ ಪರ್ಶಿಯನ್ ಶಾಸನ ತಿಳಿಸುತ್ತದೆ.[೩೩] ಮಸೀದಿಯನ್ನು ವಿಜಾಪುರ ವಾಸ್ತುಶೈಲಿಯಲ್ಲಿ ನಿರ್ಮಿಸಲಾಗಿದೆ. ವಿಸ್ತಾರವಾದ ಚೌಕ ತಳದ ಮೇಲೆ ಕೈಪಿಡಿ ಗೋಡೆಯನ್ನು ನಿರ್ಮಿಸಿ ಮೇಲೆ ಚಪ್ಪಟೆ ಆಕಾರದ ಗುಮ್ಮಟವನ್ನು ನಿರ್ಮಿಸಲಾಗಿದೆ. ಮಸೀದಿಯ ಮೂಲೆಗಳಲ್ಲಿ ಚಿಕ್ಕ ಮಿನಾರಗಳನ್ನು ಬಳಸಲಾಗಿದೆ. ಮಸೀದಿಗೆ ಚಿಕ್ಕದಾದ ಕಮಾನಿನಾಕಾರದ ದ್ವಾರವನ್ನು ಅಳವಡಿಸಲಾಗಿದೆ. ಕಮಾನುಗಳನ್ನು ಮತ್ತು ಗುಮ್ಮಟಗಳನ್ನು ಕಡಿದಾದ ಎತ್ತರವಾಗಿ ಮತ್ತು ವೃತ್ತಾಕಾರದ ಕಂಬಗಳನ್ನು ಒಳಗೊಂಡ ಈ ರಚನೆಯು ಅಪ್ಪಟ ಇಂಡೋ–ಇಸ್ಲಾಮಿಕ್ ಶೈಲಿಯ ನಿರ್ಮಿತಿ ಎನ್ನಲಾಗಿದೆ.[೩೪]

**ಶೇರಖಾನ ಜುಮ್ಮಾ ಮಸೀದಿ**

ಶೇರಖಾನ ಜುಮ್ಮಾ ಮಸೀದ ದರ್ಬಾರ ಗಲ್ಲಿಯಲ್ಲಿದೆ. ಶೇರಖಾನ ತನ್ನ ಆಡಳಿತದ ಅವಧಿಯಲ್ಲಿ ಕ್ರಿ.ಶ.೧೫೮೦ರಲ್ಲಿ ಈ ಮಸೀದಿಯನ್ನು ನಿರ್ಮಿಸಿದ.[೩೫] ಶೇರಖಾನ ಈ ಮಸೀದಿ

ಎದುರಿಗೆ ಒಂದು ದರ್ಬಾರ ಕೊಠಡಿಯನ್ನು ನಿರ್ಮಿಸಿದಂತೆ ಕಾಣುತ್ತದೆ. ದರ್ಬಾರ ಹಾಲ್‌ನ ಆಡಳಿತಗಾರರಿಗೆ ಮತ್ತು ಅಧಿಕಾರಿಗಳಿಗೆ ಪ್ರಾರ್ಥನೆಗೆ ಅನೂಕೂಲವಾಗುವ ದೃಷ್ಠಿಯಿಂದ ಈ ಮಸೀದಿಯನ್ನು ನಿರ್ಮಿಸಿರಬಹುದು. ಇದನ್ನು ಇಂಡೋ-ಸಾರ್ಸ್‌ನಿಕ್ ಶೈಲಿಯನ್ನು ಅನುಸರಿಸಿ ನಿರ್ಮಿಸಲಾಗಿದೆ.

ಈ ಮಸೀದಿಗೆ ಎರಡು ದ್ವಾರಗಳಿದ್ದು ಎರಡು ಅಂತಸ್ತಿನಿಂದ ನಿರ್ಮಿಸಲಾಗಿದೆ. ಮೊದಲ ಅಂತಸ್ತಿನ ಕಟ್ಟಡವು ಪ್ರಾಚೀನತಮವಾಗಿದ್ದು ನಂತರ ಕಾಲದಲ್ಲಿ ಎರಡನೇ ಅಂತಸ್ತನ್ನು ನಿರ್ಮಿಸಲಾಗಿದೆ. ಮಸೀದಿಯ ದ್ವಾರಗಳು ಭಾರತೀಯ ವಾಸ್ತುಶೈಲಿಯನ್ನು ನೆನಪಿಸುತ್ತವೆ. ದ್ವಾರದ ಮೇಲೆ ಕಮಾನಿನಾಕಾರದ ಗೋಡೆಯವನ್ನು ನಿರ್ಮಿಸಲಾಗಿದೆ. ಒಳಗಡೆ ವಿಶಾಲವಾದ ಆವರಣವಿದ್ದು ಸುಮಾರು ಎರಡು ನೂರು ಜನ ಪ್ರಾರ್ಥನೆ ಸಲ್ಲಿಸಲು ಸ್ಥಳವಕಾಶವಿದೆ. ಆವರಣದಲ್ಲಿ ಬೃಹತ್ ಸ್ತಂಭಗಳಿಂದ ಕೂಡಿದ ಮಂಟಪವನ್ನು ಕಾಣಬಹುದು. ಮಂಟಪದ ಪಕ್ಕದಲ್ಲಿ ಶುಚಿತ್ವಕ್ಕಾಗಿ ನೀರಿನ ಕೊಳವನ್ನು ಮತ್ತು ಒಳಭಾಗದಲ್ಲಿ ಮಿಹರಬ್ ಹಾಗೂ ಮಿಂಬರ್‌ನ್ನು ನಿರ್ಮಿಸಲಾಗಿದೆ.

### ಸುನ್ನಿ ಮಸೀದಿ

ಶೇರಖಾನ ನಿರ್ಮಿಸಿದ ಎನ್ನಲಾದ ಇನ್ನೊಂದು ಮಸೀದಿ ಈಗಿನ ಪೋಲಿಸ್ ಹೆಡಕ್ವಾಟರ್ಸ ಆವರಣದಲ್ಲಿ ಎತ್ತರವಾದ ಸ್ಥಳದಲ್ಲಿ ಪೂರ್ವಕ್ಕೆ ಅಭಿಮುಖವಾಗಿ ನಿರ್ಮಿಸಲಾಗಿದೆ. ಶೇರಖಾನ ಇದನ್ನು ಕ್ರಿ.ಶ.೧೫೮೧ರಲ್ಲಿ ಅತಿ ಸರಳವಾದ ಶೈಲಿಯಲ್ಲಿ ಮಸೀದಿಯನ್ನು ನಿರ್ಮಿಸಿದನು. ಮಸೀದಿಯನ್ನು ನಂತರ ಕಾಲದಲ್ಲಿ ಜಿರ್ಣೋದ್ಧಾರ ಗೊಳಸಲಾಗಿದೆ. ಮಸೀದಿಯ ಪ್ರಾಚೀನ ಕಟ್ಟಡ ಅವಶೇಷ ಹಿಂಬದಿಯಲ್ಲಿ ಮಾತ್ರ ಕಾಣಿಸುತ್ತದೆ. ರಾಚನಿಕ ಕಲ್ಲು ಸುಣ್ಣನ್ನು ಬಳಸಿ ಮಸೀದಿಯನ್ನು ನಿರ್ಮಿಸಲಾಗಿದೆ. ದ್ವಾರಬಾಗಿಲನ್ನು ಒಳಗೊಂಡ ವಿಶಾಲವಾದ ಹಜಾರದಲ್ಲಿ ಸ್ತಂಭಗಳಿಂದ ಆಧಾರಿತ ಚಚ್ಚನ್ನು ಕಾಣಬಹುದು. ಮೆಹ್ರಬ್ ಮತ್ತು ಮಿಂಬರ್‌ಗಳ ರಚನೆಯಿಂದ ಭವ್ಯತೆ ಕಂಡು ಬರುತ್ತದೆ. ಮಸೀದಿಯ ಮೇಲ್ಭಾಗದಲ್ಲಿ ಕಮಾನಿನಾಕಾರದ ತುರಾಯಿಯನ್ನು ಅಲಂಕಾರಿಕವಾಗಿ ಅಳವಡಿಸಲಾಗಿದೆ. ಈ ಮಸೀದಿಯ ಪಕ್ಕದಲ್ಲಿ ವಿಶಾಲವಾದ ಆವರಣವಿದೆ. ಇದು ಸೈನಿಕರ ತರಬೇತಿ ಗುಡಾರ್ ವಿದ್ದಿರಬಹುದು. ಮುಸ್ಲಿಂ ಯೋಧರಿಗೆ ಪ್ರಾರ್ಥನೆಗೆ ಅನಕೂಲವಾಗುವಂತೆ ಈ ಮಸೀದಿಯನ್ನು ನಿರ್ಮಿಸಲಾಗಿದೆ.

### ಶಹಪೂರ ಮಸೀದಿ

ಈ ಮಸೀದಿಯು ಬೆಳಗಾವಿ ನಗರದಿಂದ ೫ ಕಿ.ಮೀ. ಅಂತರದಲ್ಲಿದೆ. ಶೇರಖಾನ ತನ್ನ ಆಡಳಿತದ ಅವಧಿಯಲ್ಲಿ ಶಹಪುರ ನಗರವನ್ನು ಬ್ರಹತ್ ಮಾರುಕಟ್ಟೆ ಕೇಂದ್ರವಾಗಿ ಮಾರ್ಪಡಿಸಿ

ವಾಣಿಜ್ಯ ಉದ್ಯಮಕ್ಕೆ ಉತ್ತೇಜನ ನೀಡಿ ಬೆಳಗಾವಿಯ ಉಪನಗರವಾಗಿ ಬೆಳೆಸಿದ. ಇಲ್ಲಿ ವಿದೇಶಿಗಳಿಂದ ಹಾಗೂ ಬೇರೆ ರಾಜ್ಯಗಳಿಂದ ವ್ಯಾಪಾರಕ್ಕಾಗಿ ಬರುತ್ತಿದ್ದರು. ಇವರ ಅನಕೂಲಕ್ಕಾಗಿ ಈ ಮಸೀದಿ ನಿರ್ಮಿಸಿದನು. ಈ ಮಸೀದಿಯನ್ನು ವಿಜಾಪುರದ ವಾಸ್ತುಶೈಲಿಯಲ್ಲಿ ನಿರ್ಮಿಸಲಾಗಿದೆ. ಚಿಕ್ಕದಾದ ಕಮಾನಿಕಾರದ ದ್ವಾರ, ಪ್ರಾರ್ಥನೆಗಾಗಿ ಒಳಗಡೆ ಎತ್ತರವಾದ ಕಂಬಗಳಿಂದ ಆವೃತವಾದ ವಿಶಾಲವಾದ ಹಜಾರವನ್ನು ನಿರ್ಮಿಸಲಾಗಿದೆ. ಸುಮಾರು ಐವತ್ತರವರೆಗೆ ಜನರು ಒಂದೇ ಸಲ ಪ್ರಾರ್ಥನೆ ಸಲ್ಲಿಸಲು ಸ್ಥಳವಕಾಶವಿದೆ. ಬ್ರಹತ್ ಕಂಬಗಳ ಮೇಲೆ ಸುಣ್ಣ, ಮರಳುನಿಂದ ತಯಾರಿಸಿದ ಗಚ್ಚನ್ನು ಬಳಸಿ ಚಚ್ಚವನ್ನು ನಿರ್ಮಿಸಲಾಗಿದೆ. ಒಳಗಡೆ ಮಿಹ್ರಬ್ ಮತ್ತು ಮಿಂಬ್‌ರನ್ನು ಅಳವಡಿಸಲಾಗಿದ್ದು ಅಲಂಕಾರಿಕವಾಗಿ ವಿಶಾಲವಾದ ಕಮಾನನ್ನು ನಿರ್ಮಿಸಲಾಗಿದೆ. ಹೊರಗಡೆ ದ್ವಾರಬಾಗಿಲವನ್ನು ಎರಡು ಸ್ತಂಭಗಳ ಮೇಲೆ ಕಮಾನಿನಾಕಾರದಲ್ಲಿ ನಿರ್ಮಿಸಲಾಗಿದೆ. ಈಗ ಮಸೀದಿಯನ್ನು ಆಧುನಿಕ ಶೈಲಿಯಲ್ಲಿ ರಚಿಸಲಾಗುತ್ತಿದೆ.

**ಯಮನಾಪೂರ ಜುಮ್ಮಾ ಮಸೀದಿ**

ಬೆಳಗಾವಿ ನಗರದಿಂದ ಸುಮಾರು ೫ ಕಿ.ಮೀ ಅಂತರದಲ್ಲಿರುವ ಈ ಮಸೀದಿಯು ಎನ್.ಹೆಚ್ ೪ನ ಮಾರ್ಗ ಪಕ್ಕದಲ್ಲಿದೆ. ಈ ಮಸೀದಿಯನ್ನು ಶೇರಖಾನ ತನ್ನ ಆಡಳಿತ ಅವಧಿಯ ಅವಧಿಯದ ಅಂತ್ಯ ಭಾಗದಲ್ಲಿ ಈ ಮಸೀದಿಯನ್ನು ನಿರ್ಮಿಸಿರಬಹುದು. ಮಸೀದಿಯನ್ನು ಯಮನ್‌ದಿಂದ ಬಂದಂತಹ ಮಿರಶಾವಲಿಯವರ ಸ್ಮರಣೆಗಾಗಿ ಈ ಮಸೀದಿಯನ್ನು ನಿರ್ಮಿಸಿದಂತೆ ಕಾಣುತ್ತದೆ. ವಿಶಿಷ್ಠವಾದ ಇಂಡೋ ಇಸ್ಲಾಮಿಕ್ ಶೈಲಿಯನ್ನು ಅಳವಡಿಸಿ ಈ ಸ್ಮಾರಕವನ್ನು ನಿರ್ಮಿಸಲಾಗಿದೆ. ಚೌಕ ತಳದ ಮೇಲೆ ಚತುರ್ಮುಖವಾಗಿ ಕೈಪಿಡಿ ಗೊಡೆಯನ್ನು ನಿರ್ಮಿಸಲಾಗಿದೆ. ಹೊರಗೋಡೆಯ ಮೇಲೆ ಅಲಂಕಾರ ರೂಪವಾಗಿ ಚಿಕ್ಕದಾದ ಗೂಡು ಕಮಾನುಗಳನ್ನು ಮತ್ತು ನಾಸಿಯಂತೆ ಹೊರಗಡೆ ತುಂಡು ಕಲ್ಲುಗಳನ್ನು ಗೋಡೆಯ ಸುತ್ತಲೂ ಅಳವಡಿಸಲಾಗಿದೆ. ಗೋಡೆಯಲ್ಲಿ ರಾಚನಿಕ ಕಲ್ಲುಗಳನ್ನು, ಮರಳು, ಮತ್ತು ಸುಣ್ಣವನ್ನು ಬಳಸಿ ಕಟ್ಟಲಾಗಿದೆ. ಒಳಗಡೆ ವಿಶಾಲವಾದ ಹಜಾರದಲ್ಲಿ ಮಿಂಬ್‌ರನ್ನು ಆಕರ್ಷಕವಾಗಿ ನಿರ್ಮಿಸಲಾಗಿದೆ. ಇದರ ಚಚ್ಚ ಭಾಗವು ಶಾಲಾಕಾರದ ರೂಪದಲ್ಲಿ ನಿರ್ಮಿಸಲಾಗಿದೆ. ಮಸೀಟಿಗೆ ಕಮಾನಿಕಾರದ ಮೂರು ದ್ವಾರಗಳನ್ನು ಅಳವಡಿಸಲಾಗಿದೆ. ಮಸೀದಿ ಗೋಡೆಯ ನಾಲ್ಕು ಮೂಲೆಗಳಲ್ಲಿ ಮಿನಾರೆಟ್ಸಗಳನ್ನು ಕಾಣಬಹುದು.

**ಮಲಿಕ್ ಅಮೀನ ಅಲ್ ಮುಲ್ಕ ಮಸೀದಿ**

ಈ ಮಸೀದಿಯ ಕುರಿತು ಸ್ಥಳೀಯರಲ್ಲಿ ಭಿನ್ನಾಭಿಪ್ರಾಯವಿದೆ. ಈ ಮಸೀದಿಯ ಕುರಿತು ಅಲಿ ಆದಿಲ್‌ಶಾಹನ ಕಾಲದಲ್ಲಿ ಜನ್ನತಖಾನ ಎಂಬ ವ್ಯಾಪರಿಯು ತಾನು ಕಟ್ಟಿಸಿದ

ಅಂಗಡಿಗಳಿಂದ ಬಂದ ಆದಾಯದಿಂದ ಮಲಿಕ್ ಅಲ್ ಮುಲ್ಕ್ ಮಸೀದಿಯ ನಿರ್ವಹಣೆಗೆ ದೀಪದ ವ್ಯವಸ್ಥೆ, ನೀರಿನ ವ್ಯವಸ್ಥೆ, ಮತ್ತು ನೆಲಕ್ಕೆ ಹಾಸುವ ಚಾಪೆಗಳ ಖರ್ಚಿಗೆ ದಿನಕ್ಕೊಂದು ಟಂಕ ಹಣವನ್ನು ದಾನ ಮಾಡಿದ ಉಲ್ಲೇಖ ಈ ಶಾಸನದಲ್ಲಿ ಕಂಡು ಬರುತ್ತದೆ.[೩೫] ಬೆಳಗಾವಿಯಲ್ಲಿ ಕರೀಂ ದಾದಾಖಾನನ ಮಸೀದಿಯು ಕೆಲವು ಅಂಗಡಿಗಳ ಆದಾಯದಿಂದ ಮಸೀದಿಯ ನಿರ್ವಹಣೆ ನಡೆಯುತ್ತಿದೆ. ಆದ್ದರಿಂದ ಈ ಶಾಸನಕ್ಕೆ ಹೋಲಿಕೆಯಾದ ಮಸೀದಿ ಕರೀಂ ದಾದಾಖಾನನ ಮಸೀದಿಯೇ ಎಂದು ಸ್ಥಳೀಯ ಹೇಳುತ್ತಾರೆ. ಆದರೆ ಕರಿಂ ದಾದಾಖಾನಾನ ಮಸೀದಿಯ ವಾಸ್ತು ರಚನಾಶೈಲಿಯನ್ನು ಆಧರಸಿ ನೋಡಿದರೆ, ಈಗ ಮಸೀದಿಯನ್ನು ಮರಳಿ ನಿರ್ಮಾಣ ಮಾಡಲಾಗುತ್ತಿದೆ.

### ಶಾಹಿ ಮಸೀದಿ

ಈ ಶಾಹಿ ಮಸೀದಿಯು ಬಾಪಟಗಲ್ಲಿಯಲ್ಲಿದೆ. ಮಸೀದಿಯನ್ನು ಶಾಹಿ ವಂಶಸ್ಥರು ನಿರ್ಮಿಸಿದ್ದಾರೆ ಎಂದು ಹೇಳಲಾಗುತ್ತದೆ. ಬಾಪಟಗಲ್ಲಿರುವ ಈ ಮಸೀದಿಯು ಬಾಪಟ ವಂಶಸ್ಥರ ಅಧೀನದಲ್ಲಿದೆ. ಬೆಳಗಾವಿಯಲ್ಲಿ ಎರಡನೇ ಇಬ್ರಾಹಿಂ ಆದಿಲಶಾಹನ ಸಹೋದರ ಇಸ್ಮಾಯಿಲ್ ಬೆಳಗಾವಿಯನ್ನು ಉಪ ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ಮಾಡಿದ ಸಂದರ್ಭದಲ್ಲಿ ಈ ಮಸೀದಿಯನ್ನು ನಿರ್ಮಾಣ ಮಾಡಿರಬಹುದು ಎನ್ನಲಾಗಿದೆ. ಮಸೀದಿಯನ್ನು ಅತಿ ಸರಳವಾದ ವಾಸ್ತು ಅನುಸರಿಸಿ ಸುಮಾರು ೨೦x೨೦ ಅಡಿಯಲ್ಲಿ ಗೋಡೆಯನ್ನು ನಿರ್ಮಿಸಲಾಗಿದೆ. ಕಮಾನಿನಾಕಾರದ ವಿಸ್ತಾರ ದ್ವಾರವನ್ನು ನಿರ್ಮಿಸಲಾಗಿದೆ. ಈ ಮಸೀದಿಯ ಮೇಲ್ಭಾಗದಲ್ಲಿ ಇತ್ತೀಚಿಗೆ ಮೆಲಂತಸ್ತನ್ನು ಆಧುನಿಕ ಶೈಲಿಯಲ್ಲಿ ನಿರ್ಮಾಣ ಮಾಡಲಾಗಿದೆ. ಒಳಗಡೆ ಕಂಬಗಳಿಂದ ಕೂಡಿದ ವಿಶಾಲವಾದ ಹಜಾರದಿಂದ ಕೂಡಿದೆ.

### ಅಬ್ದುಲ್ ಶಾ ಮಸೀದಿ

ಅಬ್ದುಲ್ ಶಾ ಮಸೀದಿಯು ಜಾರಗಾರಗಲ್ಲಿಯಲ್ಲಿದೆ. ಈ ಮಸೀದಿಯನ್ನು ಅಬ್ದುಲ್ ಶಾ ಅವರು ನಿರ್ಮಿಸಿದ ಕಾರಣ ಅವರ ಹೆಸರಿನಿಂದಲೇ ಕರೆಯಲಾಗುತ್ತದೆ. ಅಬ್ದಾಲ್ ಶಾ ಅವರು ಆದಿಲ್‌ಶಾಹಿ ಅವರ ಆಡಳಿತದಲ್ಲಿ ನಗರದ ಕೊತ್ವಾಲರಾಗಿ ಸೇವೆಗೈದ ಶಿಸ್ತಿನ ಸಿಪಾಯಿ ಎನಸಿದ್ದಾರೆ. ಈ ಮಸೀದಿಯನ್ನು ಯಾವಾಗ ನಿರ್ಮಿಸಿದರು ಎಂಬುದಕ್ಕೆ ಮಾಹಿತಿಗಳಿಲ್ಲ. ಕಟ್ಟಡ ರಚನಾ ಶೈಲಿಯನ್ನು ಅನುಸರಿಸಿ ಸುಮಾರು ೧೭ನೇ ಶತಮಾನದಲ್ಲಿ ನಿರ್ಮಾಣವಾಗಿರ ಬಹುದು. ಅದರೆ ಈಗ ಮಸೀದಿಯು ಆಧುನಿಕ ಶೈಲಿಯಿಂದ ಮಾರ್ಪಡುಗೊಂಡಿದೆ. ಮಸೀದಿಯನ್ನು ರಾಚನಿಕ ಕಲ್ಲುಗಳನ್ನು ಬಳಸಿ ಎತ್ತರವಾದ ಜಗತಿಯ ಮೇಲೆ ನಿರ್ಮಿಸಲಾಗಿದೆ. ಸುತ್ತಲೂ ಗೋಡೆಯಿಂದ ಆವೃತಗೊಂಡಿದ್ದು ಈ ಮಸೀದಿಯ ದ್ವಾರವನ್ನು ಕಮಾನಿನಾಕಾರದಲ್ಲಿ

ನಿರ್ಮಿಸಲಾಗಿದೆ. ಈ ಮಸೀದಿಯನ್ನು ಏಕ ಕಮಾನ ಮಸೀದಿ ಎಂದು ಕೂಡಾ ಕರೆಯಲಾಗುತ್ತದೆ. ಅಬ್ದಾಲ ಶಾವರು ಈ ಮಸೀದಿಯಲ್ಲಿ ದಿನಂಪ್ರತಿ ಒಂದು ಕಮಾನಿನ ಬಳಿಯಲ್ಲಿಯೆ ಪ್ರಾರ್ಥನೆ ಸಲ್ಲುಸುತ್ತಿದ್ದರು. ಆದ ಕಾರಣ ಇದನ್ನು ಏಕ ಕಮಾನ ಮಸೀದಿ ಎಂದು ಸ್ಥಳೀಯರು ಕರೆಯಲು ಪ್ರಾರಂಭಿಸಿದರು. ಈ ಮಸೀದಿ ನಿರ್ವಹಣೆಗೆ ಚಿರಾನ ಎಂಬ ಸೇವಕರನ್ನು ನೇಮಿಸಿ ಅವರಿಗೆ ಸ್ವಲ್ಪ ಜಹಗೀರನ್ನು ನೀಡಲಾಯಿತು. ಆ ಭಾಗವನ್ನು ಈಗ ಚಿರಾನ ಖಡ್ಡಾ ಎಂದು ಕರೆಯಲಾಗುತ್ತದೆ.[೩೬]

## ಜೋಡ ಗುಮ್ಮಟ ಮಸೀದಿ

ಜೋಡ ಗುಮ್ಮಟ ಮಸೀದಿಯು ಬೆಳಗಾವಿಯ ಪೊಲೀಸ್ ಹೆಡ್‌ಕ್ವಾಟರ್ಸನಲ್ಲಿದೆ. ಈ ಮಸೀದಿಯನ್ನು ಅಸದಖಾನ ಮಗನಾದ ಕಿಶ್ವರಖಾನನು ತನ್ನ ಆಡಳಿತದ ಅವಧಿಯಲ್ಲಿ ನಿರ್ಮಾಣ ಮಾಡಿದ ಎನ್ನಲಾಗಿದೆ. ಮತ್ತು ಮಸೀದಿಯ ಪಕ್ಕದಲ್ಲಿ ಒಂದು ಸೆರೆಮನೆಯನ್ನು ನಿರ್ಮಿಸಿದನು. ಜೋಡ ಗುಮ್ಮಟದ ಅಡಿಯಲ್ಲಿ ಎರಡು ಸಮಾಧಿಗಳನ್ನು ಕಾಣಬಹುದು. ಈ ಸಮಾಧಿಗಳ ಬಗ್ಗೆ ಸ್ಥಳೀಯರಲ್ಲಿ ಮಾಹಿತಿ ಇಲ್ಲ. ಜೋಡ ಗುಮ್ಮಟವನ್ನು ಸ್ಮಾರಕವನ್ನು ಕಿಶ್ವರಖಾನ ತನ್ನ ತಾಂತ್ರಿಕ ದೃಷ್ಟಿಯ ಪ್ರಯೋಗಾತ್ಮಕ ಕಟ್ಟಡವಾಗಿರಬಹುದು. ಈತ ಮಧ್ಯಕಾಲೀನ ಒಬ್ಬ ಶ್ರೇಷ್ಠ ಅಭಿಯಂತರನಾಗಿರಬೇಕು. ಈತನು ಬೆಳಗಾವಿಯ ಬೆಳಗಾವಿ ಜೋಡ ಗುಮ್ಮಟ ಮಸೀದಿ ಮತ್ತು ಸವಣೂರ ನವಾಬರ ಕೋಟೆಯನ್ನು ಹಾಗೂ ವಿಜಾಪುರದ ಒಳಕೋಟೆಯನ್ನು ನಿರ್ಮಿಸಿದನು.

ಜೋಡ ಗುಮ್ಮಟ ಮಸೀದಿಯನ್ನು ದಖ್ಖನ್ ವಾಸ್ತುಶೈಲಿಯಲ್ಲಿ ನಿರ್ಮಿಸಲಾಗಿದೆ. ಮಸೀದಿಯ ರಚನಾ ಶೈಲಿ, ಅಲಂಕಾರವನ್ನು ಗಮನಿಸಿದರೆ, ಬೆಳಗಾವಿ ನಗರದ ಇತರೆ ಸ್ಮಾರಕ ವಾಸ್ತುಶೈಲಿಗಳಿಗಿಂತ ಭಿನ್ನವಾಗಿದೆ. ಈ ಮಸೀದಿಯನ್ನು ಎತ್ತರವಾದ ಜಗತಿಯ ಮೇಲೆ ಆಯತಕಾರದ ವಿನ್ಯಾಸದಲ್ಲಿ ಮಸೀದಿಯನ್ನು ನಿರ್ಮಿಸಲಾಗಿದೆ. ಮಸೀದಿಯ ಒಳಗಡೆ ವಿಶಾಲವಾದ ಅಂಗಳವಲ್ಲಿ ಚತುಷ್ಕೇಂದ್ರದಿಂದ ಕೂಡಿದ ಕಮಾನಗಳ ಗುಮ್ಮಟದ ಅಡಿಯಲ್ಲಿ ಸಮಾಧಿಗಳನ್ನು ಮಾಡಲಾಗಿದೆ. ಈ ಕಟ್ಟಡವನ್ನು ಆಯತಾಕಾರ ವಿನ್ಯಾಸದಲ್ಲಿ ರಚಿಸಲಾಗಿದೆ.

ಗೋಡೆಯ ಭಾಗದಲ್ಲಿ ಅಲಂಕಾರಕವಾಗಿ ತೂಗುದೀಪ ಮತ್ತು ಉಬ್ಬು ರೇಖಾ ಚಿತ್ರಗಳನ್ನು ಅಳವಡಿಸಲಾಗಿದೆ. ಇದರ ಹಿಂಬದಿಯಲ್ಲಿ ವಿಸ್ತಾರವಾದ ಸ್ಥಳವಾಕಾಶವಿದ್ದು ಪ್ರಾರ್ಥನೆಗೆ ಅವಕಾಶ ಮಾಡಿಕೊಡಲಾಗಿದೆ. ಇಲ್ಲಿ ಬೃಹತ್ ಚತುಷ್ಕೇಂದ್ರಿತ ದ್ವಿಪತ್ರಲಂಕಾರದ ಕಮಾನುಗಳು ಸ್ತಂಭಗಳ ಮೇಲೆ ಆಧಾರಿತವಾಗಿ ನಿಂತಿವೆ. ಈ ಸ್ತಂಭಗಳ ಮೇಲೆ ಹಾಗೂ

ಒಳಭಾಗದಲ್ಲಿ ಅಲಂಕಾರಿಕ ಹೂಬಳ್ಳಿಗಳ, ಮಂಟಪಗಳ ರೇಖಾ ಚಿತ್ರಗಳು ಈ ಮಸೀದಿಯನ್ನು ಶೃಂಗರಿಸಿವೆ.[೩೭]

**ಬಾಷಿಬನ ಮಸೀದಿ**

ಈ ಬಾಷಿಬನ ಮಸೀದಿಯು ಬೆಂಡಿ ಬಜಾರದ ಬಾಷಿಬನ ದರ್ಗಾದ ಹಿಂಬದಿಯಲ್ಲಿ ನಿರ್ಮಿಸಲಾಗಿದೆ. ಈ ಮಸೀದಿಯನ್ನು ಇದ್ರುದ ಬಾಷಿಬನರು ನಿರ್ಮಿಸಿದರು. ಮಸೀದಿಯು ವಿಶಾಲವಾದ ಆವರಣದಲ್ಲಿ ಸರಳವಾದ ರಚನೆಯೊಂದಿಗೆ ಪ್ರಾರ್ಥನೆಗೋಸ್ಕರ ನಿರ್ಮಿಸಿದರು. ಈಗ ಮಸೀದಿಯನ್ನು ಜಿರ್ಣೋದ್ಧಾರಗೊಳಿಸಿ ಆಧುನಿಕ ವಾಸ್ತುಶೈಲಿಯಲ್ಲಿ ರಚಿಸಲಾಗಿದೆ. ಮಸೀದಿಯು ಮೇಲಂತಸ್ತನಿಂದ ಕೂಡಿದ್ದು ಕೆಳಭಾಗದಲ್ಲಿ ಗೋಡೆಯನ್ನು ಅಲಂಕರಿಸಲಾಗಿದೆ. ಮೇಲಂತಸ್ತನ ಕಟ್ಟಡದಲ್ಲಿ ಕಮಾನುಗಳನ್ನು ಹಾಗೂ ಗೋಡೆಯ ಮೇಲ್ಭಾಗದಲ್ಲಿ ಚಿಕ್ಕ ಮಿನಾರಗಳನ್ನು ಅಳವಡಿಸಲಾಗಿದೆ. ಈ ಮಸೀದಿಯಲ್ಲಿ ಸುಮಾರು ನೂರು ಜನರು ಒಂದೇ ಸಲ ಪ್ರಾರ್ಥನೆ ಸಲ್ಲಿಸಲು ಸ್ಥಳವಕಾಶವಿದೆ.

ಒಟ್ಟಿನಲ್ಲಿ ಬೆಳಗಾವಿ ನಗರದಲ್ಲಿ ಇನ್ನೂ ಸುಮಾರು ಐವತ್ತಕ್ಕಿಂತ ಹೆಚ್ಚಿನ ಮಸೀದಿಗಳು ಕಂಡು ಬರುತ್ತವೆ. ಅವು ನಂತರ ಕಾಲದಲ್ಲಿ ನಿರ್ಮಾಣಗೊಂಡಿವೆ. ಅವುಗಳಲ್ಲಿ ಪ್ರಮುಖವಾದ ಕೆಲವು ಮಸೀದಿಗಳ ಪಟ್ಟಿಯನ್ನು ಈ ಕೆಳಗೆ ನೀಡಲಾಗಿದೆ.

೧. ಚೋಂಗಾ ಮಸೀದ–ಶನಿವಾರ ಕೂಟದಲ್ಲಿದೆ.

೨. ಬಾರಾ ಇಮಾಮ ಮಸೀದಿ–ಮಾಳಿಗಲ್ಲಿ

೩. ಜುಮ್ಮಾ ಮಸೀದ–ನವಿಗಲ್ಲಿ ಶಹಾಪೂರ

೪. ಬೇಪಾರಿ ಮಸೀದ–ಜೋಡಗಲ್ಲಿ

೫. ಕಾಕರ ಮೊಹಲ್ಲಾ ಮಸೀದಿ–ಕ್ಯಾಂಪ ಏರಿಯಾ

೬. ಮೊಮೀನ ಮಸೀದ–ಜೋಶಿ ಗಲ್ಲಿ

೭. ಜುಮ್ಮಾ ಮಸೀದ–ಕ್ಯಾಂಪ ಏರಿಯಾ

೮. ಮುಜಾವರ ಗಲ್ಲಿ ಮಸೀದ

೯. ಚಾಂದ ಮಸೀದ–ಚಾಂದ ಗಲ್ಲಿ

೧೦. ಮಾಳಿ ಮಸೀದಿ–ಖಾಸಭಾಗ

೧೧. ಮಸೀದ ಮಚ್ಛೆ–ಬೆಳಗಾವಿ

೧೨. ಶೇಖ ಸರ್ದಾರ ಗಲ್ಲಿ ಮಸೀದ–ಬೆಳಗಾವಿ

ಹೀಗೆ ಇನ್ನೂ ಹಲವು ಮಸೀದಿಗಳು ಬೆಳಗಾವಿ ನಗರದಲ್ಲಿ ಕಾಣುತ್ತವೆ. ಅವುಗಳನ್ನು ಆಧುನಿಕ ವಾಸ್ತು ವಿನ್ಯಾಸಶೈಲಿಯಲ್ಲಿ ನಿರ್ಮಿಸಲಾಗಿದೆ.

**ಅಶ್ರುಖಾನಗಳು**

ಅಶ್ರುಖಾನಗಳು ಮುಸ್ಲಿಂ ಧಾರ್ಮಿಕ ವಾಸ್ತುಶಿಲ್ಪಗಳಲ್ಲಿ ಒಂದಾಗಿದ್ದು. ಅಶ್ರುಖಾನ ಸ್ಮಾರಕಗಳ ರಚನೆ ಕಂಡುಬರುವುದು ತೀರ ವಿರಳ. ಇವುಗಳನ್ನು ವರ್ಷದ ಕೆಲವು ದಿನಗಳ ಕಾಲ ಮೊಹರಂ ಹಬ್ಬದಲ್ಲಿ ಮಾತ್ರ ಬಳಸಲಾಗುತ್ತದೆ. ಆದ ಕಾರಣ ಇವುಗಳ ರಚನೆ ತುಂಬಾ ವಿರಳ. ಮೊಹರಂ ಹಬ್ಬವನ್ನು ಇಸ್ಲಾಂ ವರ್ಗದವರು ಅಚರಿಸುವುದು ಕಡಿಮೆ, ಕಾರಣ ಇದೊಂದು ಶೋಕ ದಿನಾಚರಣೆ ಹಬ್ಬ ಆದ್ದರಿಂದ ಈ ಹಬ್ಬದ ಆಚರಣೆಯನ್ನು ನಿಷೇಧಿಸಲು ಪ್ರಯತ್ನಿಸಲಾಗುತ್ತಿದೆ. ಹಾಗು ಹಬ್ಬದ ಆಚರಣೆಯ ಮಹತ್ವ ಕಳೆದುಕೊಳ್ಳುತ್ತಾ ಸಾಗಿದೆ. ಹಿಂದೂಗಳು ಈ ಹಬ್ಬದಲ್ಲಿ ಪಾಲ್ಗೊಂಡು ಸಂಭ್ರಮದಿಂದ ಆಚರಿಸುತ್ತಾರೆ. ಈ ಆಚರಣೆಯು ಮಾರಣ ಹೋಮದ ಪ್ರಸಂಗವನ್ನು ತಿಳಿಸಿಕೊಡುವ ರಮ್ಯ ಕಥಾನಕವಾಗಿದೆ.

ಇದರೊಂದಿಗೆ ಈ ಹಬ್ಬಕ್ಕೆ ಮೀಸಲಾದ ಅಶ್ರುಖಾನಗಳು ಕಣ್ಮರೆಯಾಗುತ್ತಿವೆ. ಇವುಗಳ ಬಳಕೆ ಕಡಿಮೆಯಾದ್ದರಿಂದ ಅಶ್ರುಖಾನಗಳನ್ನು ನಾಶಪಡಿಸಿ ಅಲ್ಲಿ ಮಸೀದಿಗಳನ್ನು ನಿರ್ಮಾಣ ಮಾಡಲಾಗುತ್ತದೆ. ಇನ್ನೂ ಕೆಲವು ಅಶ್ರುಖಾನಗಳು ವಿನಾಶದ ಅಂಚಿನಲ್ಲಿವೆ. ಅಶ್ರುಖಾನಗಳಿಗೆ ಪ್ರತ್ಯೇಕವಾದ ವಾಸ್ತು ಶೈಲಿ ಬಳಸಿ ನಿರ್ಮಿಸಲಾಗಿರುವುದಿಲ್ಲ. ಒಂದು ಸಾಮಾನ್ಯ ತೆರೆದ ಮಂಟಪದ ರೀತಿಯಲ್ಲಿ ನಿರ್ಮಿಸಲಾಗುತ್ತದೆ. ಮುಂದೊಂದು ದಿನ ಅಶ್ರೂಖಾನ ಸ್ಮಾರಕಗಳು ಹಾಗೂ ಈ ಹಬ್ಬ ಆಚರಣೆಯು ಮರೆಮಾಚುತ್ತದೆ. ಬೆಳಗಾವಿ ನಗರದಲ್ಲಿ ಇಂತಹ ಅಶ್ರುಖಾನಗಳು ಪ್ರತಿಯೊಂದು ಗಲ್ಲಿಯಲ್ಲಿ ಇದ್ದವು. ಅಲ್ಲಿ ಯಾವುದೇ ನಿರ್ದಿಷ್ಟ ವಾಸ್ತು ಶೈಲಿಯನ್ನು ಬಳಸಿದ ಸ್ಮಾರಕಗಳು ಕಂಡು ಬರುವುದಿಲ್ಲ. ಕೇವಲ ಡೋಲಿಗಳು ಕುಳಿತುಕೊಳ್ಳುವ ಸ್ಥಳಗಳಾಗಿವೆ. ಅವುಗಳು

೧. ದರ್ಬಾರ ಗಲ್ಲಿಯಲ್ಲಿ

೨. ಬಂಜರ ಗಲ್ಲಿ

೩. ಕಡಕ ಗಲ್ಲಿ

೪. ಜಾಗದಾರ್ ಗಲ್ಲಿ

೫. ಬಹೂದೂರ ಗಲ್ಲಿ

೬. ಬಂಡಾರ ಶಾಹ ಗಲ್ಲಿ

೭. ಖಾದರ ಶಾಹ ಗಲ್ಲಿ

**ಈದ್ಗಾ ಸ್ಮಾರಕಗಳು**

ಈದ್ಗಾ ಸ್ಮಾರಕಗಳನ್ನು ಮುಸ್ಲಿಂ ಧರ್ಮದ ಆಚರಣೆಯಲ್ಲಿ ಅತಿ ಪ್ರಮುಖವಾಗಿ ಬಳಸಲಾಗುತ್ತದೆ. ಈದ್ಗಾ ಸ್ಮಾರಕಗಳನ್ನು ವಿಶಾಲವಾದ ಆವರಣದಲ್ಲಿ ನಿರ್ಮಿಸಲಾಗಿರುತ್ತದೆ. ಈ ಸ್ಮಾರಕವನ್ನು ವರ್ಷದಲ್ಲಿ ಎರಡು ಸಲ ಮಾತ್ರ ಬಳಸಲಾಗುತ್ತದೆ. ರಮಜಾನ ಹಬ್ಬದಂದು ಮತ್ತು ಬಕ್ರಿದ ಹಬ್ಬದ ದಿನದಂದು ಈದ್ಗಾ ಮೈದಾನದಲ್ಲಿ ಎಲ್ಲಾ ಇಸ್ಲಾಂ ಬಾಂಧವರು ಸೇರಿ ಪ್ರಾರ್ಥನೆ ಸಲ್ಲಿಸುತ್ತಾರೆ. ಮತ್ತು ಪರಸ್ಪರ ಬೆರತು ಶುಭಾಶಯವನ್ನು ಹೇಳುತ್ತಾರೆ. ತಮ್ಮ ಬಂಧುಗಳ ಮನೆಗೆ ಭೇಟಿ ನೀಡಿ ಒಬ್ಬರನೊಬ್ಬರು ಆಲಂಗಿಸಿ ತಮ್ಮ ಗೌರವವನ್ನು ಸಲ್ಲಿಸುತ್ತಾರೆ. ಹಾಗೂ ತಮ್ಮ ಧರ್ಮ ಗುರು ಮುಖ್ಯಸ್ಥ (ಇಮಾಮ್)ರು ಧರ್ಮ, ಸಮಾಜದ ಕುರಿತು ಆದೇಶ ಮತ್ತು ಸಂದೇಶಗಳನ್ನು ನೀಡುತ್ತಾರೆ. ಈ ಈದ್ಗಾ ಮೈದಾನ ಸ್ಮಾರಕದ ಬಳಿ ಎಲ್ಲಾ ಮುಸ್ಲಿಂ ವರ್ಗದವರು ಸೇರಿ ತಮ್ಮ ಐಕ್ಯತೆಯ ಭಾವವನ್ನು ಸೂಚಿಸುವ ಸ್ಥಳವಾಗಿದೆ.

ಈದ್ಗಾ ಕಟ್ಟಡದ ನಿರ್ಮಾಣ ಶೈಲಿ ಎಲ್ಲ ಪ್ರದೇಶಗಳಲ್ಲಿ ಒಂದೇ ಆಗಿರುತ್ತದೆ. ಈ ಕಟ್ಟಡವನ್ನು ಮಸೀದಿಯಲ್ಲಿ ನಿರ್ಮಿಸುವ (ಮಿಹ್ರಬ್) ಕಟ್ಟಡದ ಪ್ರತಿರೂಪದಲ್ಲಿ ನಿರ್ಮಿಸಲಾಗುತ್ತದೆ. ಪಶ್ಚಿಮಕ್ಕೆ ಅಭಿಮುಖವಾಗಿ ಒಂದು ದೊಡ್ಡ ಗೋಡೆಯನ್ನು ನಿರ್ಮಿಸಲಾಗುತ್ತದೆ. ಅದರ ಮೇಲೆ ಚಿಕ್ಕ ಚಿಕ್ಕ ಮಿನಾರಗಳಿಂದ ಶೃಂಗರಿಸಲಾಗಿರುತ್ತದೆ. ಇಂತಹ ಸ್ಮಾರಕಗಳು ಬೆಳಗಾವಿ ನಗರದಲ್ಲಿ ಹಲವು ಕಡೆ ನಿರ್ಮಿಸಲಾಗಿದೆ.

೧. ಆನಗೋಳ

೨. ವಡಗಾಂವ

೩. ಅಂಜುಮನ

೪. ಮಜಗಾಂವ

೫. ರೇಲ್ವೆ ಸ್ಟೇಶನ ಬಳಿ

೬. ಪಿರನವಾಡಿ

ಹೀಗೆ ಬೆಳಗಾವಿ ನಗರದಲ್ಲಿ ಸು ೧೦ ಕ್ಕಿಂತಲೂ ಹೆಚ್ಚೂ ಈದ್ಗಾ ಸ್ಮಾರಕಗಳು ಕಂಡು ಬರುತ್ತವೆ.

**ಧಾರ್ಮಿಕೇತರ ಕಟ್ಟಡಗಳು (ಸ್ಮಾರಕಗಳು)**

ಕ್ರಿ.ಶ.೧೩ನೇ ಶತಮಾನದಿಂದ ೧೭ನೇ ಶತಮಾನದವರೆಗೆ ಸುಮಾರು ಐದು ಶತಮಾನಗಳ ಕಾಲ ಆಳಿದ ಬಹುಮನಿಗಳು ಮತ್ತು ವಿಜಾಪುರದ ಆದಿಲ್‌ಶಾಹಿಗಳ ಕಾಲದ ಸರದಾರರು,

ಸೇನಾಪತಿಗಳು, ಜಹಗೀರದಾರರು. ಬೆಳಗಾವಿ ನಗರದಲ್ಲಿ ಧಾರ್ಮಿಕೇತರ ಕಟ್ಟಡಗಳನ್ನು ತಮ್ಮ ಅವಶ್ಯಕತೆ ಅನುಸಾರವಾಗಿ ನಿರ್ಮಿಸಿದ್ದಾರೆ. ಮುಖ್ಯವಾಗಿ ಕೋಟೆ, ಮಹಲ್, ಆಡಳಿತ ಕಛೇರಿಗಳು, ಸೆರೆಮನೆ, ಮತ್ತು ಮನೆಗಳನ್ನು ಸಾಮಾನ್ಯ ವಾಸ್ತುಶೈಲಿಗಳಲ್ಲಿ ನಿರ್ಮಿಸಲಾಗಿದೆ.

**ಕೋಟೆಗಳು**

ಸಂರಕ್ಷಣಾ ದೃಷ್ಟಿಯಿಂದ ನಿರ್ಮಾಣವಾದ ಈ ಕೋಟೆಗಳು ಜನವಸತಿ ರಕ್ಷಣಾ ಕವಚಗಳಾಗಿ ರಕ್ಷಣಾ ಗೋಡೆಗಳ ಅವಶ್ಯಕತೆಯ ಪರಿಭೂತಿಯಲ್ಲಿ ಬೆಳಗಾವಿ ನಗರದ ಮುಖ್ಯ ಕೋಟೆಯನ್ನು ನಿರ್ಮಿಸಲಾಗಿದೆ. ಈ ಕೋಟೆಯನ್ನು ಬೃಹತ್ ಕಲ್ಲುಗಳನ್ನು ಬಳಸಿ ಮೂರು ಸ್ತರಗಳಲ್ಲಿ ರಚಿತವಾದ ಈ ಕೋಟೆಯು, ಅತ್ಯಂತ ಕೆಳಗಡೆ ಕದಂಬ ರಚನಾ ಶೈಲಿ ಮಧ್ಯದಲ್ಲಿ ರಟ್ಟರ ರಚನಾಶೈಲಿ ತದನಂತರ ವಿಜಾಪುರ ಆದಿಲ್‌ಶಾಹಿಗಳ ಕಾಲದಲ್ಲಿ ಕೋಟೆಯ ಅಳವಡಿಕೆ ಇಸ್ಲಾಂ ಶೈಲಿಯ ನಿದರ್ಶನವಾಗಿದೆ.

ಕಟೆದು ಹೊಳಪಿನ ಕಲ್ಲುಗಳಿಂದ ನಿರ್ಮಿಸಿದ ಬೆಳಗಾವಿ ಕೋಟೆಯ ವಿನ್ಯಾಸವನ್ನು ಆಧರಿಸಿ ವನದುರ್ಗ, ಸ್ಥಳದುರ್ಗ ಎನ್ನಲಾಗಿದೆ. ಬೆಳಗಾವಿಯ ಕೋಟೆಯು ಮೊಟ್ಟಮೊದಲು ಶಾತವಾಹನರಿಂದ ಕಟ್ಟಲು ಪ್ರಾರಂಭಿಸಲಾಯಿತು. ವಡಗಾಂವ ಮಾಧವಾಪುರದಿಂದ ಈ ಹೊಸ ತಾಣದಲ್ಲಿ ಕೋಟೆಯ ಕಾರ್ಯಭಾರ ಸ್ಥಳಾಂತರವಾಯಿತು. ಕೋಟೆಯ ತಳಪಾಯದಲ್ಲಿ ಇಷ್ಟಿಕಾ ಸ್ತರಗಳು ಶಾತವಾಹನರನ್ನು ಸ್ಮರಿಸುತ್ತದೆ. ರಟ್ಟರ ಒಂದನೇ ಲಕ್ಷ್ಮೀದೇವ ಕ್ರಿ.ಶ. ೧೧೮೪ರಲ್ಲಿ ತನ್ನ ರಾಜಧಾನಿಯನ್ನು ಸವದತ್ತಿಯಿಂದ ಬೆಳಗಾವಿಗೆ ವರ್ಗಾಯಿಸಿ ಪೂರ್ವದ ಬದಿಯ ಅಗಳವನ್ನು ಹಾಗು ಕೋಟೆಗೋಡೆಯ ಭಾಗವನ್ನು ಭದ್ರಪಡಿಸಿದನು.೧೫ ನಂತರ ವಿಜಾಪುರದ ಆದಿಲ್‌ಶಾಹಿಗಳು ರಚನಾಂಶದಿಂದಲೂ ಭದ್ರವಾದ ಕೋಟೆಯಾಗಿ ಮಾರ್ಪಡಿಸಿದರು.

ಈ ಕೋಟೆಯ ರಚನಾ ವಾಸ್ತವು ಸಿಲಿಂಡರನ ರೂಪದಲ್ಲಿ ಅಥವಾ ಅಂಡಾಕೃತಿಯಲ್ಲಿದ್ದು ೧೦೦ ಎಕರೆ ಹೆಕ್ಟರ್‌ನಲ್ಲಿ ೧೦೦ಮೀx೮೦೦ಮೀ ವ್ಯಾಸ ಹೊಂದಿದೆ. ಇದರ ಸುತ್ತಳತೆ ೨.೫ ಕಿ.ಮೀ ವಾಗಿದ್ದು ೧೦ ರಿಂದ ೧೫ ಮೀ ದಪ್ಪಳತೆ ಹೊಂದಿದೆ. ಒಳಭಾಗದಲ್ಲಿ ಕೆಳ ಇಳಿಜಾರಿನ ದಿಬ್ಬ ಏರಿಸಲಾಗಿದ್ದು ಇದರ ಕೆಳಭಾಗದಲ್ಲಿ ಗೋಡೆನಡೆ (wall walk) ಹೊಂದಿದ್ದು ಸೈನಿಕರ ಪಹರೆ ಕಾವಲಿಗೆ ಅನವು ಮಾಡಿಕೊಟ್ಟಿದೆ. ಈ ಕೋಟೆಯ ಸುತ್ತಲೂ ಸುಮಾರು ೩೦x೩೫ ಅಗಲ ಮತ್ತು ೧೦ ರಿಂದ ೧೫ ಮಿ ಆಳವಾದ ನೀರಿನ ಕಂದಕವನ್ನು ತೊಡಲಾಗಿದೆ. ಇದರಲ್ಲಿ ಸದಾ ನೀರು ತುಂಬಿರುತ್ತದೆ.[೧೬] ರಟ್ಟರಿಂದ ನಿರ್ಮಾಣವಾದ ಮಣ್ಣಿನ ಕೋಟೆಯಲ್ಲಿ ಜೈನ ಮುನಿಗಳ ವಾಸದ ಕೇಂದ್ರವಾಗಿತ್ತು. ಇಲ್ಲಿ ಸುಮಾರು ೧೦೧ ಮುನಿಗಳು ನೆಲಸಿದ ಸಂದರ್ಭದಲ್ಲಿ ಬೆಂಕಿ ಉದ್ಭವಿಸಿ ಅಗ್ನಿಯಲ್ಲಿ ಆಹುತಿಯಾದರು. ಅವರ ನೆನಪಿಗಾಗಿ ೧೦೧

ಬಸದಿಗಳನ್ನು ನಿರ್ಮಿಸಲಾಗಿತ್ತು. ನಂತರ ಕೋಟೆ ವಿಜಾಪುರ ಆಡಳಿತಗಾರರ ವಶವಾದ ಮೇಲೆ ಈ ಸ್ಮಾರಕಗಳ ಕಲ್ಲುಗಳನ್ನು ಬಳಸಿ ಈ ಕೋಟೆಯನ್ನು ನಿರ್ಮಿಸಲಾಯಿತು ಎನ್ನಲಾಗಿದೆ.[೩೯]

ಅಸದದಖಾನ ಆಡಳಿತದ ಸಂದರ್ಭದಲ್ಲಿ ಹಿಜರಿ ಶಕೆ ೯೩೭ ಕ್ರಿ.ಶ.೧೫೩೦ ರಲ್ಲಿ ಕೋಟೆಯ ಉತ್ತರ ದಿಕ್ಕಿನ ಗೊಡೆಯ ಮೇಲಿನ ಪರ್ಶಿಯನ್ ಶಾಸನದಿಂದ ಅಮೀರನಾದ ಯಾಕುಬ ಅಲಿಖಾನ ಎಂಬುವನು ಕೋಟೆಯ ಉತ್ತರ ದಿಕ್ಕಿನ ಗೋಡೆಯನ್ನು ಪುನರ್‌ನಿರ್ಮಾಣ ಕಾರ್ಯ ಪೂರ್ಣಗೊಳಿಸಿದ ಉಲ್ಲೇಖ ಕಂಡು ಬರುತ್ತದೆ. ಅಂದರೆ ಈ ಶಾಸನದ ಪ್ರಕಾರ ಕೋಟೆ ಈ ಕಾಲದಲ್ಲಿ ಪೂರ್ಣಗೊಂಡಿರಬಹುದೆನ್ನಲಾಗಿದೆ. ಇನ್ನೊಂದು ಶಾಸನ ಬೆಳಗಾವಿ ಕೋಟೆಯಲ್ಲಿ ದೊರೆತಿದೆ. ಈಗ ಅದು ವಿಜಾಪುರ ವಸ್ತು ಸಂಗ್ರಹಾಲಯದಲ್ಲಿದೆ. ಈ ಶಾಸನದ ಕಾಲಮಾನ ಹಿಜರಿ ಶಕೆ ೧೦೪೯ ರ ಕ್ರಿಶ ೧೬೩೩-೩೪ ರಲ್ಲಿ ಅತಿಯಾದ ಮಳೆಯಿಂದ ಕುಸಿದು ಬಿದ್ದ ಕೋಟೆ ಗೋಡೆಯನ್ನು ಅಬ್ದುಲ್ ಹುಸೇನ ಎಂಬ ಅಮೀರ ಪುನರ್ ನಿರ್ಮಿಸಿದರ ವಿಷಯವನ್ನು ಈ ಶಾಸನವು ತಿಳಿಸುತ್ತದೆ.[೪೦]

ಈ ಕೋಟೆ ಒಳಗಡೆ ಹೋಗಿ ಬರಲು ಪಶ್ಚಿಮ ದ್ವಾರವನ್ನು ಬಳಸಲಾಗುತ್ತಿತ್ತು. ಆದಿಲ್ ಶಾಹಿಗಳ ಸೈನ್ಯವು ಕೋಟೆಯ ಪಶ್ಚಿಮ ಭಾಗದಲ್ಲಿ ನೆಲಸಿರುತ್ತಿತ್ತು. ಮೂಲತಹ ಈ ಕೋಟೆಗೆ ಮೂರು ದ್ವಾರಗಳಿದ್ದವು. ಒಂದು ದ್ವಾರವನ್ನು ಬ್ರಿಟಿಷರು ನೆಲಸಮಗೊಳಿಸಿದರು. ಮೂರನೇಯ ದ್ವಾರವನ್ನು ಒಂದನೇ ಅಲಿ ಎಂಬುವನು ಕಟ್ಟಿಸಿದನು. ಈ ದ್ವಾರದಿಂದ ಪ್ರವೇಸಿಸಲು ಅತಿ ಚಿಕ್ಕ ಕಿಂಡಿ ಕೋಣೆ ಇದ್ದಿತು ಎನ್ನಲಾಗಿದೆ. ಈಗಿನ ದ್ವಾರಬಾಗಿಲಿನ ಪಕ್ಕದಲ್ಲಿ ಮೂಲತಹ ಒಂದು ಗುಹೆ ಮಾರ್ಗವಿದ್ದತು. ಬ್ರಿಟಿಷರು ಅದನ್ನು ಮುಚ್ಚಿಸಿ ೧೮೧೬ ರಲ್ಲಿ ದುರ್ಗಾ ಮೂರ್ತಿಯನ್ನು ಪ್ರತಿಷ್ಠಾಪಿಸಿದರು. ಹಾಗೂ ದುರ್ಗಾ ದೇವಾಸ್ಥಾನದ ಪೂಜಾರಿ ಜೈನನಾಗಿರುವುದು ವಿಶೇಷ.[೪೧]

ಅಸದಖಾನ ಕೋಟೆಯಲ್ಲಿ ಒಂದು ಮಹಲ್‌ನ್ನು ನಿರ್ಮಿಸಿದನು. ೧೮೧೮ ರಲ್ಲಿ ಬ್ರಿಟಿಷ ಅಧಿಕಾರಿ ಮನ್ರೋ ಕೋಟೆಯನ್ನು ವಶಪಡಿಸಿಕೊಂಡು ಕೋಟೆಯಲ್ಲಿರುವ ಮಹಲ್ ಇತರೆ ಕಟ್ಟಡಗಳನ್ನು ನಾಶಗೊಳಿಸಿದನು. ಈ ಮಹಲ್‌ನ ದ್ವಾರವು ಈಗಲೂ ನೋಡಲು ದೊರೆಯುತ್ತದೆ. ಇಲ್ಲಿ ನಗಾರಿಖಾನ ಇತ್ತು ಎನ್ನಲಾಗಿದೆ.

**ಶಹಪೂರ ಕೋಟೆ**

ಶಹಪುರ ಕೋಟೆಯು ಬೆಳಗಾವಿ ನಗರದಿಂದ ಐದು ಕಿ.ಮೀ ಅಂತರದಲ್ಲಿತ್ತು. ಕ್ರಿಶ ೧೫೫೦ರಲ್ಲಿ ಬೆಳಗಾವಿ ಸರದಾರನಾಗಿ ನೇಮಕಗೊಂಡ ಶೇರಖಾನನು ಶಹಪುರ ಎಂಬ ಹಳ್ಳಿಯಲ್ಲಿ ಕೋಟೆಯನ್ನು ನಿರ್ಮಿಸಿ ಅಲ್ಲಿ ಮುತ್ತು ರತ್ನ ಬಂಗಾರ, ಬೆಳ್ಳಿ ಮಾರುಕಟ್ಟೆಯನ್ನು

ಪ್ರಾರಂಭಿಸಿದನು. ಇಲ್ಲಿ ರೇಷ್ಮೆ ಕೈಗಾರಿಕೆ ಕೇಂದ್ರಗಳನ್ನು ಸ್ಥಾಪಿಸಿ ವಿದೇಶಿ ವ್ಯಾಪಾರ ವಹಿವಾಟು ಮಾಡಲಾಗುತ್ತಿತ್ತು. ಬೆಳಗಾವಿ ನಗರದ ಉಪವಿಭಾಗವಾಗಿ ಶಹಪುರ ಬೆಳೆಯಿತು. ನಂತರ ಆಧುನಿಕ ನಗರ ನಿರ್ಮಾಣದ ಅಡಿಗೆ ಸಿಲುಕಿ ಈಗ ಅಲ್ಲಿ ಯಾವುದೇ ಕೋಟೆಯ ಅವಶೇಷಗಳ ಕಂಡು ಬರುವುದಿಲ್ಲ.

### ಯಳ್ಳೂರುಗಡ ಕೋಟೆ

ಇದನ್ನು ರಾಜಹಂಸಗಡ ಕೋಟೆ ಎಂದು ಕೂಡಾ ಕರೆಯಲಾಗುತ್ತದೆ. ಬೆಳಗಾವಿ ನಗರದಿಂದ ೭ ಕಿ.ಮೀ ಅಂತರದಲ್ಲಿ ಇರುವ ಕೋಟೆಯು ಬೆಳಗಾವಿ ನಗರದ ರಕ್ಷಣೆಗೆ ಅತೀ ಸೂಕ್ತವಾದ ರಕ್ಷಣಾ ಕೋಟೆಯಾಗಿದೆ. ಬೆಳಗಾವಿ ನಗರಕ್ಕೆ ಹಿರೇಬಾಗೇವಾಡಿಯಿಂದ ಬರುವಾಗ ಬಲಭಾಗಕ್ಕೆ ಎತ್ತರಗುಡ್ಡದ ಮೇಲೆ ಕಾಣಿಸುವ ಈ ಕೋಟೆಯನ್ನು ಅಸದಖಾನನು ಕಲ್ಲಿನಿಂದ ಪುನರ್ ನಿರ್ಮಾಣಮಾಡಿದನು. ಈ ಕೋಟೆಯಿಂದ ಗೋವಾ ಮತ್ತು ಕಾರವಾರ ಭಾಗದ ಶತ್ರುಗಳಿಂದ ಬರಬಹುದಾದ ಆಪತ್ತನ್ನು ತಡೆಯುವ ಸಲುವಾಗಿ ಈ ಕೋಟೆಯನ್ನು ನಿರ್ಮಿಸಲಾಗಿದೆ. ಈ ಕೋಟೆಯನ್ನು ಗಡಿ ಸಂರಕ್ಷಣಾ ಆಯಕಟ್ಟಿನ ಠಾಣೆಯನ್ನಾಗಿ ಬಳಸಿಕೊಳ್ಳಲಾಗಿದೆ. ಇದೊಂದು ಗಿರಿದುರ್ಗ ರಕ್ಷಣಾ ಕಟ್ಟಡವಾಗಿದೆ. ಈ ಕೋಟೆಯು ಹದಿಮೂರು ಬುರುಜುಗಳಿಂದ ಕೂಡಿದ್ದು ಪ್ರವೇಶದ್ವಾರವು ೨೦ ಅಡಿ ಎತ್ತರ ೬ ಅಡಿ ಅಗಲವಾದ ಕಪ್ಪು ಶಿಲೆಯನ್ನು ಬಳಸಿ ನಿರ್ಮಿಸಲಾಗಿದೆ. ಈ ಕೋಟೆಯಿಂದ ಬೆಳಗಾವಿ ನಗರದ ಮುಖ್ಯ ಕೋಟೆಗೆ ಗುಹಾ ಮಾರ್ಗವಿದೆ ಎನ್ನಲಾಗಿದೆ. ಈ ಕೋಟೆಯು ಒಂದು ವೀಕ್ಷಣಾಲಯವಾಗಿತ್ತು.[೪೨]

### ಅಸದಖಾನ ಅರಮನೆ

ಅಸದಖಾನ ಬೆಳಗಾವಿ ಜಹಗೀರವನ್ನು ಪಡೆದುಕೊಂಡ ನಂತರ ಮೊದಲಿಗೆ ಕೋಟೆಯನ್ನು ಭದ್ರಪಡಿಸಿದನು. ನಂತರ ತನ್ನ ವಸತಿ ವ್ಯವಸ್ಥೆಗೆ ಅರಮನೆ (ಮಹಲ್) ನ್ನು ನಿರ್ಮಿಸಿದನು.ಈ ಅರಮನೆಯು ವಿಶಾಲವಾದ ಆವರಣದಲ್ಲಿ ವಿಜಾಪುರ ವಾಸ್ತುಶೈಲಿಯನ್ನು ಬಳಸಿ ನಿರ್ಮಿಸಲಾಗಿತ್ತು. ಆದರೆ ಅರಮನೆಯ ಮಹಲ್‌ನ್ನು ಬ್ರಿಟಿಷರ ಅವಧಿಯಲ್ಲಿ ನೆಲಸಮಗೊಳಿಸಲಾಗಿದೆ. ಅರಮನೆಯ ಯಾವುದೇ ಅವಶೇಷಗಳು ಕಂಡು ಬರುವುದಿಲ್ಲ. ಈಗ ಕೇವಲ ಅರಮನೆಯ ದ್ವಾರಬಾಗಿಲು ಮಾತ್ರ ಕಾಣಸಿಗುತ್ತದೆ.[೪೩]

### ನಗಾರಿಖಾನಾ

ಕೋಟೆಯೊಳಗಿನ ಅಸದಖಾನ ಅರಮನೆಯ ದ್ವಾರಬಾಗಿಲಿನ ಪಕ್ಕದಲ್ಲಿ ಈ ನಗಾರಿಕಾನಾ ಕೊಠಡಿಯನ್ನು ನಿರ್ಮಿಸಲಾಗಿತ್ತು. ಈ ನಗಾರಿಕಾನಾವನ್ನು ಬಳಸಿಕೊಂಡು ಅಸದಖಾನ ದಿನಕ್ಕೆ

ಎರಡು ಸಲ ಸೈನಿಕರಿಂದ ಸಲಾಂ ತೆಗೆದುಕೊಳ್ಳುತ್ತಿದ್ದನು. ಈ ಕಟ್ಟಡವು ಕೂಡಾ ಬ್ರಿಟಿಷರ ಅವಧಿಯಲ್ಲಿ ನಾಶಗೊಂಡಿತು ಎನ್ನಲಾಗಿದೆ. ಇನ್ನೂ ಈ ಕೋಟೆಯ ಆವರಣದಲ್ಲಿ ಖಾನಕಾ (ಶಿಕ್ಷಣ ಕೇಂದ್ರ) ಮತ್ತು ನೌಬತ್‌ಖಾನಾ ಇತರೆ ಕಛೇರಿಗಳು ಬ್ರಿಟಿಷರ ಅವಧಿಯಲ್ಲಿ ನೆಲಸಮಗೊಂಡಿವೆ ಎಂದು ಕ್ಯಾಂಪ್‌ಬೆಲ್ ಬಾಂಬೆ ಗೇಝಿಟಿಯರ್‌ನಲ್ಲಿ ಉಲ್ಲೇಖಿಸಿದ್ದಾನೆ.[೪೪] ೧೭ನೇ ಶತಮಾನದ ಆದಿ ಭಾಗದಲ್ಲಿ ಬಂದೇ ಅಲಿ ಎಂಬಾತನು ಕೋಟೆಯ ಅಗಸಿಯನ್ನು ಕಟ್ಟಿಸಿದನು ಎಂದು ಇಲ್ಲಿಯ ಮತ್ತೊಂದು ಶಾಸನ ತಿಳಿಸುತ್ತದೆ.[೪೫]

## ದರ್ಬಾರ ಹಾಲ್

ಈ ದರ್ಬಾರ ಹಾಲ್ (ಕೊಠಡಿ)ಯನ್ನು ಬೆಳಗಾವಿ ನಗರದ ಪೇಟೆಯ ಮಧ್ಯಭಾಗದಲ್ಲಿ ನಿರ್ಮಿಸಲಾಗಿದೆ. ಕೊಠಡಿಯನ್ನು ಶೇರ್‌ಖಾನ ನಿರ್ಮಿಸಿರಬಹುದು ಎನ್ನಲಾಗಿದೆ. ಈ ಕೊಠಡಿಯು ಈಗ ಬಾಷಿಬನ ವಂಶಸ್ಥರ ಅಧೀನದಲ್ಲಿದೆ. ಮುಂಚೆ ಬಾಷಿಬನ್ ವಂಶದವರು ಬೆಳಗಾವಿ ಕೆಲವು ಪ್ರದೇಶಗಳ ಇನಾಂದಾರರಾಗಿದ್ದರು. ಅವರು ಕೊಠಡಿಯನ್ನು ಬಳಸಿರಬಹುದು ಎಂದು ಕೆಲವು ವಿದ್ವಾಂಸರ ಅಭಿಪ್ರಾಯಪಟ್ಟಿದ್ಧಾರೆ. ಈ ಕೊಠಡಿಯಲ್ಲಿ ಶಾಹಿ ಮನೆತನದವರು ದರ್ಬಾರ ನಡೆಸಿರಬಹುದು ಎನ್ನಲಾಗಿದೆ. ಅದಕ್ಕೆ ಸಾಕ್ಷಿ ಎಂಬಂತೆ ಒಂದನೇ ಇಬ್ರಾಹಿಂ ಅದಿಲ್‌ಶಾಹಿ ಸಹೋದರನಾದ ಇಸ್ಮಾಯಿಲ್ ಆದಿಲ್‌ಶಹನು ತನ್ನ ಸಹೋದರನ ವಿರುದ್ಧ ಬಂಡಾಯವೆದ್ದು ಆತ ಬೆಳಗಾವಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸುಮಾರು ಐದು ತಿಂಗಳುಗಳ ಕಾಲ ಆಡಳಿತ ನಡೆಸಿದ್ದಾನೆ.[೪೬]

ಆತ ಈ ದರ್ಬಾರ ಕೊಠಡಿಯಿಂದಲೇ ನಗರದ ಆಡಳಿತ ಮತ್ತು ಇತರೆ ಕಾರ್ಯಗಳನ್ನು ನಡೆಸಿರಬಹುದು ಎಂದು ಊಹಿಸಲಾಗಿದೆ. ಈತನ ಅಧಿಕಾರದ ಅವಧಿಯಲ್ಲಿ ಈ ಬಾಷಿಬನ ವಂಶಸ್ಥರು ಈ ಭಾಗದ ಇನಾಂದಾರ ಆಗಿದ್ದರು. ಅಂದಿನಿಂದ ಇಲ್ಲಿಯವರೆಗೆ ಈ ಕೊಠಡಿ ಅವರ ಅಧೀನದಲ್ಲಿದೆ. ದರ್ಬಾರನ ಎದುರಿಗೆ ಶೇರಖಾನ ಒಂದು ಜುಮ್ಮಾ ಮಸೀದಿಯನ್ನು ಸಹ ನಿರ್ಮಿಸಿದ್ದಾನೆ. ಅಂದರೆ ದರ್ಬಾರಿನ ಆಡಳಿತಗಾರರಿಗೆ ಅನುಕೂಲವಾಗುವ ದೃಷ್ಟಿಯಿಂದ ಈ ಮಸೀದಿಯನ್ನು ನಿರ್ಮಿಸಿರಬಹುದು. ದರ್ಬಾರ ಕೊಠಡಿಯು ಆಧುನಿಕ ವಾಸ್ತು ವಿನ್ಯಾಸಕ್ಕೆ ಒಳಗಾಗಿ ತನ್ನ ಕಟ್ಟಡದ ಮೂಲ ಸ್ವರೂಪವನ್ನು ಕಳೆದುಕೊಂಡಿದೆ. ಈ ಕಟ್ಟಡವನ್ನು ಜುಮ್ಮಾ ಮಸೀದಿಗೆ ಎದುರಾಗಿ ಪಶ್ಚಿಮಾಭಿಮುಖವಾಗಿ ಹಾಗೂ ಉತ್ತರ ದಕ್ಷಿಣವಾಗಿ ಆಯತಾಕಾರದಲ್ಲಿ ವಿಶಾಲವಾದ ಅತಿ ದೊಡ್ಡ ಕೊಠಡಿಯನ್ನು ನಿರ್ಮಿಸಲಾಗಿತ್ತು. ಆದರೆ ಈಗ ಆಧುನಿಕ ಶೈಲಿಯಿಂದ ಕೊಠಡಿಯನ್ನು ವಿಭಾಗಿಸಿ ಉಪಯೋಗಿಸಿಕೊಳ್ಳಲಾಗಿದೆ. ಇದೊಂದು ಮಧ್ಯಕಾಲೀನ ಆಡಳಿತದ ಪ್ರಮುಖ ಸ್ಮಾರಕವೆನಿಸಿದೆ.

**ಸೆರೆಮನೆ**

ಬೆಳಗಾವಿ ನಗರದಲ್ಲಿ ಈಗ ಕಾಣುವ ಹಿಂಡಲಗಾ ಸೆರೆಮನೆಯನ್ನು ಬ್ರಿಟಿಷರ ಅವಧಿಯಲ್ಲಿ ನಿರ್ಮಿಸಲಾಗಿದೆ. ಅದಕ್ಕಿಂತ ಪೂರ್ವದಲ್ಲಿ ಅಂದರೆ ಮಧ್ಯಕಾಲೀನ ಮುಸ್ಲಿಂ ಆಡಳಿತಗಾರರ ಅವಧಿಯಲ್ಲಿ ನಿರ್ಮಿಸಲಾದ ಎರಡು ಸೆರಮನೆಗಳು ಇದ್ದವು ಎನ್ನಲಾಗಿದೆ. ಒಂದು ಕೋಟೆಯ ಒಳಭಾಗದಲ್ಲಿತ್ತು. ಅದನ್ನು ಬ್ರಿಟಿಷರ ಅವಧಿಯಲ್ಲಿ ನೆಲಸಮಗೊಳಿಸಲಾಗಿದೆ. ಇನ್ನೊಂದು ಈಗಿನ ಪೋಲಿಸ್ ಹೆಡ್‌ಕ್ವಾಟರ್ಸ್‌ನ ಆವರಣದ ಜೋಡು ಗುಮ್ಮಟ ಪಕ್ಕದಲ್ಲಿ ನಿರ್ಮಿಸಲಾಗಿದೆ. ಈ ಸೆರಮನೆಯು ಪ್ರಾಕೃತಿಕ ವಿಕೋಪದಿಂದ ವಿನಾಶದ ಅಂಚಿನಲ್ಲಿದೆ. ಅದರ ಪುನರ ನಿರ್ಮಾಣ ರಕ್ಷಣೆ ನಮ್ಮೆಲ್ಲರ ಹೊಣೆಯಾಗಿದೆ. ಈ ಸೆರೆಮನೆಯನ್ನು ಇಲ್ಲಿ ಏಕೆ ನಿರ್ಮಿಸಲಾಯಿತು ಎಂದು ಚರ್ಚೆಗೆ ಗ್ರಾಸವಾಗಿದೆ. ಈ ಸ್ಮಾರಕವನ್ನು ಅಸದಖಾನ ಮಗನಾದ ಕಿಶ್ವರ್‌ಖಾನನು ನಿರ್ಮಿಸಿದನು. ಈತನ ಆಳ್ವಿಕೆ ಅವಧಿಯಲ್ಲಿ ಪೋಲಿಸ್ ಹೆಡ್‌ಕ್ವಾಟರ್ಸ್‌ನ ವಿಶಾಲವಾದ ಆವರಣವನ್ನು ಸೈನಿಕರ ತರಬೇತಿಗಾಗಿ ಬಳಸಲಾಗುತ್ತಿತ್ತು. ಅದರ ಪಕ್ಕದಲ್ಲಿ ಈ ಕಟ್ಟಡವನ್ನು ವಸತಿ ವ್ಯವಸ್ಥೆಗೆ ಮಾಡಿರಬಹುದು, ಇಲ್ಲವೇ ಯುದ್ಧದಲ್ಲಿ ಸೆರೆಸಿಕ್ಕಂತಹ ಸೈನಿಕರನ್ನು ಬಂಧಿಸಲು ಈ ಕಟ್ಟಡವನ್ನು ಉಪಯೋಗಿಸಿರಬಹುದು ಎಂಬ ಊಹಾತ್ಮಕ ಉತ್ತರಗಳು ದೊರೆಯುತ್ತವೆ. ಆದರೆ ನಿಖರವಾದ ಆಧಾರಗಳಿಲ್ಲ. ಈ ಸ್ಮಾರಕದ ವಾಸ್ತುವನ್ನು ಆಧರಿಸಿ ನೋಡಿದಾಗ ಇದನ್ನು ಒಂದು ವಿಶಾಲ ಆವರಣ ಸುತ್ತಲೂ ಪ್ರಾಕಾರ ಗೋಡೆಯಂತೆ ನಿರ್ಮಿಸಲಾಗಿದೆ. ಕಟ್ಟಡವನ್ನು ಸರಳವಾದ ವಾಸ್ತು ರಚನೆ ಅನುಗುಣವಾಗಿ ಸುಟ್ಟ ಮಣ್ಣಿನಿಂದ ಮಾಡಿದ ಇಟ್ಟಿಗೆಯನ್ನು ಮತ್ತು ಕಟ್ಟಡದ ಮೇಲ್ಗಡೆ ಕಟ್ಟಿಗೆಯ ಛಾವಣಿಯನ್ನು ಬಳಸಲಾಗಿದೆ. ಅದರ ಮೇಲೆ ವೃತ್ತಾಕಾರದ ಕಪ್ಪು ಹೆಂಚು ಬಳಸಲಾಗಿದೆ. ಕೊಠಡಿಗೆ ಜಾಲಂಧ್ರಗಳನ್ನು ಅಳವಡಿಸಲಾಗಿದೆ. ಒಂದು ಕೊಠಡಿಯಲ್ಲಿ ಸುಮಾರು ಇಪ್ಪತ್ತು ಜನರ ವಾಸಕ್ಕೆ ಸ್ಥಳವಕಾಶವಿದೆ. ಇಂತಹ ಇಪ್ಪತ್ತು ಕೊಠಡಿಗಳನ್ನು ಈ ಆವರಣದಲ್ಲಿ ನಿರ್ಮಿಸಲಾಗಿದೆ.

**ಮನೆಗಳು**

ಮನುಷ್ಯ ತನ್ನ ಬದುಕಿಗೆ ಅನುಗುಣವಾಗಿ ಪ್ರಕೃತಿಗೆ ಸರಿಹೊಂದುವಂತೆ ಸ್ಥಳೀಯವಾಗಿ ದೊರೆಯುವ ಸಂಪನ್ಮೂಲಗಳನ್ನು ಬಳಿಸಿಕೊಂಡು ಯೋಗ್ಯತಾನುಸಾರವಾಗಿ ಮನೆಗಳನ್ನು ನಿರ್ಮಾಣ ಮಾಡುವುದು ಸಾಮಾನ್ಯ ಲಕ್ಷಣಗಳಾಗಿವೆ. ಆದರೆ, ಮಾನವ ಆಧುನಿಕ ಯುಗದ ತಂತ್ರಜ್ಞಾನಕ್ಕೆ ಆಕರ್ಷಿತನಾಗಿ ತಮ್ಮ ಪ್ರಕೃತಿಗೆ ವಿಭಿನ್ನವಾದ ವಸ್ತುಗಳನ್ನು ಬಳಸಿಕೊಂಡು ಬಲು ವೆಚ್ಚದ ಮನೆಗಳನ್ನು ನಿರ್ಮಿಸಿಕೊಳ್ಳುತ್ತಿದ್ದಾರೆ. ಆದರೆ ಇವು ವಿನಾಶಕ್ಕೆ ಸುಲಭ ದಾರಿಯಾಗಿವೆ. ಇದೇ ರೀತಿ ಬೆಳಗಾವಿ ನಗರದಲ್ಲಿ ಆಧುನಿಕ ಯುಗಕ್ಕೆ ಸಿಲುಕಿ ಮಧ್ಯಕಾಲೀನ ಹಲವಾರು

ಸ್ಮಾರಕಗಳು ವಿನಾಶದ ಅಂಚಿನಲ್ಲಿವೆ. ಮಧ್ಯಕಾಲೀನಲ್ಲಿ ನಿರ್ಮಾಣವಾದಂತಹ ಮನೆಗಳು ಉಳಿದು ಬಂದಿರುವುದು ಅವರ ತಂತ್ರಜ್ಞಾನಕ್ಕೆ ಸಾಕ್ಷಿಯಾಗಿದೆ. ಅವರು ಸ್ಥಳೀಯವಾಗಿ ದೊರೆಯುವ ಪ್ರಾಕೃತಿಕ ಸಂಪನ್ಮೂಲಗಳನ್ನು ಬಳಸಿಕೊಂಡು ಮನೆಗಳನ್ನು ನಿರ್ಮಿಸಿದ್ದಾರೆ. ಬೆಳಗಾವಿ ನಗರದ ಮಧ್ಯಭಾಗದಲ್ಲಿ ಆ ಕಾಲದ ಮನೆಗಳು ಈಗಲೂ ನೋಡಲು ಸಿಗುತ್ತವೆ. ಹೆಚ್ಚಾಗಿ ಆಡಳಿತಗಾರರ ಮನೆಗಳಾದ ಇನಾಂದಾರ, ಜಾಗೀರದಾರ, ಕೊತ್ವಾಲರ ಮನೆಗಳನ್ನು ಕಾಣಬಹುದು. ಇವು ಎರಡು ಅಂತಸ್ತಿನಿಂದ ಕೂಡಿದ್ದು, ಒಂದು ಅಡುಗೆ ಕೋಣೆ, ಒಂದು ಪ್ರತ್ಯೇಕ ವಿಶ್ರಾಂತಿ ಕೊಠಡಿ, ಒಂದು ವಿಶಾಲವಾದ ಹಜಾರವನ್ನು ನಿರ್ಮಿಸಿರುವುದು ಸಾಮಾನ್ಯ.

ಅದೇ ರೀತಿಯಾಗಿ ಜನಸಾಮಾನ್ಯರ ಮನೆಗಳು ಕೇವಲ ಒಂದು ಅಡುಗೆ ಕೋಣೆ, ಒಂದು ವಿಶ್ರಾಂತಿ ಕೊಠಡಿಯನ್ನು ನಿರ್ಮಿಸಿರುವುದು ಕಂಡು ಬರುತ್ತದೆ. ಕೋಟೆಯ ಒಳಭಾಗದಲ್ಲಿ ಹಾಗೂ ನಗರದ ಮಧ್ಯಭಾಗದಲ್ಲಿ ಆಡಳಿತಗಾರರ, ಸೇವಕರ ಮನೆಗಳು ಅತಿ ಸಾಧಾರಣ ವಾಸ್ತು ಅನುಸರಿಸಿ ನಿರ್ಮಿಸಲಾಗಿದೆ. ಇವು ೧೦x೧೦, ೧೦x೧೨, ೧೦x೧೫, ಅಡಿ ವಿಸ್ತೀರ್ಣತೆ ಹೊಂದಿವೆ. ಮಧ್ಯಕಾಲೀನ ಆಡಳಿತಗಾರರ ಕಾಲದಲ್ಲಿ ಕೋಟೆಯ ಒಳಗಡೆ ಸುಮಾರು ಒಂದು ನೂರು ಮನೆಗಳು ಇದ್ದವು. ಅವುಗಳಲ್ಲಿ ಹತ್ತು ಲಿಂಗಾಯತರ, ಹತ್ತು ಜೈನರ, ಹತ್ತು ಬ್ರಾಹ್ಮಣರ ಹಾಗೂ ಸೈನಿಕರ ಮನೆಗಳು ಇದ್ದವು ಎಂದು ತಿಳಿಯುತ್ತದೆ. ಬ್ರಿಟಿಷರು ಕ್ರಿ ಶ ೧೮೧೮ ರಲ್ಲಿ ಈ ಕೋಟೆಯನ್ನು ವಶಪಡಿಸಿಕೊಂಡರು.೪೭ ಆನಂತರ ಅಲ್ಲಿಯ ಜನರನ್ನು ಹೊರ ಹಾಕಿ ಆಡಳಿತ ನಡೆಸಿದರು. ಹೀಗೆ ಬೆಳಗಾವಿ ನಗರದಲ್ಲಿ ಹಲವಾರು ಸ್ಮಾರಕಗಳು ಮಧ್ಯಕಾಲೀನ ಆಡಳಿತಗಾರರ ಅವಧಿಯಲ್ಲಿ ನಿರ್ಮಾಣಗೊಂಡು ಆಧುನಿಕ ಯುಗದ ಅಡಿಯಲ್ಲಿ ಈ ಸ್ಮಾರಕಗಳು ನಾಶಗೊಳ್ಳುತ್ತಿವೆ. ಇವುಗಳ ಸಂರಕ್ಷಣೆ ಜನಸಾಮಾನ್ಯರ ಹೊಣೆಯಾಗಿದೆ.

**ಅಡಿಟಿಪ್ಪಣಿಗಳು**

೧. ಬಿಜಾಪುರದ ಆದಿಲ್‌ಶಾಹಿ, ಪು.೨೮೨

೨. ಅವಲೋಕನ, ಪು.೨೮೧

೩. ಅದೇ, ಪು.೨೮೧

೪. ಅದೇ, ಪು.೧೨೦

೫. ಬೆಳಗಾವಿ ಕಾ ಆಯನಾಮೆ, ಪು.೧೫

೬. ಸಂದರ್ಶನ ಚಿಸ್ತಿ ದರ್ಗಾದ ಮುಜಾವರ ನೀಡಿದ ಮಾಹಿತಿ

೭. ಬೆಳಗಾವಿ ಕಾ ಆಯನಾಮೆ, ಪು.೧೮

೮. ಸಂದರ್ಶನ, ಅಬುಜಾದ ಯಾಸೀನ ದರ್ಗಾದ ಮುಜಾವರ ನೀಡಿದ ಮಾಹಿತಿ

೯. ಬೆಳಗಾವಿ ಕಾ ಆಯನಾಮೆ, ಪು.೨೫

೧೦. ಸಂದರ್ಶನ, ಬಾಷಿಬನ ವಂಶಸ್ಥರು ನೀಡಿದ ಮಾಹಿತಿ

೧೧. ಸಂದರ್ಶನ, ಅಸದಖಾನ ದರ್ಗಾದ ಮುಜಾವರ ನೀಡಿದ ಮಾಹಿತಿ

೧೨. ಬೆಳಗಾವಿ ಗೆಜೆಟೆಯರ್, ಬೆಂಗಳೂರ ಪು.೫೧೫

೧೩. ಬೆಳಗಾವಿ ಕಾ ಆಯನಾಮೆ, ಪು.೩೫

೧೪. ಅದೇ, ಪು.೩೬

೧೫. ಸಂದರ್ಶನ, ಸ್ಥಳೀಯ ವ್ಯಕ್ತಿ ಸಯ್ಯದ ಸಾಜೀದರವರು ನೀಡಿದ ಮಾಹಿತಿ

೧೬. ಬೆಳಗಾವಿ ಕಾ ಆಯನಾಮೆ, ಪು.೩೮

೧೭. ಅದೇ ಪು.೪೯

೧೮. ಸಂದರ್ಶನ, ಸ್ಥಳೀಯ ಸಾಜಿದ್ ನೀಡಿದ ಮಾಹಿತಿ

೧೯, ಸಂದರ್ಶನ, ಸ್ಥಳೀಯ ಮುಜಾವರ ನೀಡಿದ ಮಾಹಿತಿ

೨೦. ಸಂದರ್ಶನ, ಸ್ಥಳೀಯ ಮುಜಾವರ ನೀಡಿದ ಮಾಹಿತಿ

೨೧. ಬುಸಾತೀನ ಸಲಾತಿನ, ಪು.೫೫

೨೨. ಸಂದರ್ಶನ ಸ್ಥಳೀಯ ವ್ಯಕ್ತಿ ಸಯ್ಯದರು ನೀಡಿದ ಮಾಹಿತಿ

೨೩. ಸಂದರ್ಶನ ದರ್ಗಾದ ಮುಜಾವರ ನೀಡಿದ ಮಾಹಿತಿ

೨೪. ಕರ್ನಾಟಕ ಚರಿತ್ರೆ, ಸಂ.೪, ಪು.೩೦೪

೨೫. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.೬೧೨

೨೬. ಬೆಳಗಾವಿ ಜಿಲ್ಲೆ ಭವ್ಯ ಪರಂಪರೆ, ಪು.೭೮

೨೭. ಕರ್ನಾಟಕದ ಪರ್ಶಿಯನ್, ಅರೆಬಿಕ್, ಉರ್ದು ಶಾಸನಗಳು, ಪು.೨೧

೨೮. ಬೆಳಗಾವಿ ಜಿಲ್ಲೆ ವಾಸ್ತುಶಿಲ್ಪ ನಿಧಿ, ಪು .೫೮

೨೯. ಕರ್ನಾಟಕದ ಪರ್ಶಿಯನ್, ಅರೆಬಿಕ್, ಉರ್ದು ಶಾಸನಗಳು, ಪು.೨೨

೩೦. ಬೆಳಗಾವಿ ಕಾ ಆಯನಾಮೆ, ಪು.೫೯

೩೧. ಬೆಳಗಾವಿ ಕೋಟೆ.ಕೋತ್ತಲಗಳು, ಪು.೩೪

೩೨. ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ, ಪು.೭೬

೩೩. ಬೆಳಗಾವಿ ಸಂಸ್ಕೃತಿ, ಪು.೧೩೭

೩೪. ಬೆಳಗಾವಿ ಜಿಲ್ಲೆ ವಾಸ್ತು ಶಿಲ್ಪ ನಿಧಿ, ಪು .೫೯

೩೫. ಅದೇ, ಪು.೧೩೭

೩೬. ಸಂದರ್ಶನ ಸ್ಥಳೀಯ ವ್ಯಕ್ತಿ ಅಬ್ದುಲ್‌ರಿಂದ ಪಡೆದ ಮಾಹಿತಿ,

೩೭. ಬೆಳಗಾವಿ ಕಾ ಆಯನಾಮೆ, ಪು.೫೪

೩೮. ಬೆಳಗಾವಿ ಪಾರಂಪರಿಕ ಕಟ್ಟಡಗಳು, ಪು.೩೧೮

೩೯. ಬೆಳಗಾವಿ ಕಾ ಆಯನಾಮೆ, ಪು.೪೩

೪೦. ಕರ್ನಾಟಕದ ಪರ್ಶಿಯನ್, ಅರೆಬಿಕ್, ಉರ್ದು ಶಾಸನಗಳು, ಪು.೨೨

೪೧. ಪೊರ್ವೋಕ್ತ, ಪು.೪೮

೪೨. ಬೆಳಗಾವಿ ಪಾರಂಪರಿಕ ಕಟ್ಟಡಗಳು, ಪೂರ್ವೋಕ್ತ, ಪು.೩೨೯

೪೩. ಬೆಳಗಾವಿ ಕೋಟೆ.ಕೋತ್ತಲಗಳು, ಪೊರ್ವೋಕ್ತ, ಪು.೩೫

೪೪. ಅದೇ, ಪು.೩೬

೪೫. ಬೆಳಗಾವಿ ಬೆಳಕು, ಪು.೬೦

೪೬. ಬುಸಾತೀನ ಸಲಾತಿನ, ಪು.೫೫

೪೭. ಬೆಳಗಾವಿ ಕಾ ಆಯನಾಮೆ, ಪೊರ್ವೋಕ್ತ, ಪು.೨೭

## ಅಧ್ಯಾಯ ನಾಲ್ಕು

# ಆಚರಣೆ ಉತ್ಸವಗಳು

ಯಾವುದೇ ಮಾನವ ಸಮುದಾಯದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನ ಸ್ವರೂಪವು ಅದರ ಮೂಲಭೂತ ಜೀವನ ಸಿದ್ಧಾಂತವನ್ನು ಅವಲಂಭಿಸಿರುತ್ತದೆ. ಇಸ್ಲಾಂ ವರ್ಗದವರಿಗೆ ಯಾವಾಗಲು ಮೂಲ ನೆಲೆಯಾದದ್ದು ಧರ್ಮ. ಈ ಧರ್ಮದ ಮೂಲಕವೇ ಸಕಲ ಕಾರ್ಯಗಳನ್ನು ಪೂರೈಸಿಕೊಳ್ಳುವುದು ಜೀವನದ ಧ್ಯೇಯವಾಗಿರಿಸಿಕೊಂಡಿರುತ್ತಾರೆ.

ಮುಸ್ಲಿಂ ಧರ್ಮವು ತನ್ನ ಮೂಲ ತತ್ವ ಸಿದ್ಧಾಂತಗಳ ನೆಲೆಯಲ್ಲಿ ವಿಧಿ ನಿಷೇಧಗಳನ್ನೊಳಗೊಂಡ ನಿತ್ಯ ಕರ್ಮಗಳನ್ನು ಶ್ರದ್ಧಾಪೂರ್ಣವಾಗಿ ಆಚರಿಸುತ್ತಾರೆ. ಈ ಸೈದ್ಧಾಂತಿಕ ನೆಲೆಯಲ್ಲಿ ದೇವನಾದ(ಅಲ್ಲಾನ) ಅಸ್ತಿತ್ವಕ್ಕಾಗಿ ಹಾಗೂ ಆತನ ಚೇತನ ಸ್ವರೂಪದ ಮೂಲಭೂತವಾದ ವಿಚಾರಗಳ ಸರಳೀಕರಣಕ್ಕಾಗಿ ಆತನಲ್ಲಿ ಅಧೀನವಾಗುವುದು ಧರ್ಮದ ತಿರುಳು. ಮುಸ್ಲಿಂ ಧರ್ಮದಲ್ಲಿ ಏಕದೇವತಾ ಉಪಾಸನೆಗೆ ಮಹತ್ವ ನೀಡಲಾಗಿದ್ದು ಇಸ್ಲಾಂ ಧರ್ಮದ ಮೂಲಭೂತವಾದ ವಿಚಾರ. ಅಲ್ಲಾನನ್ನು ಅರಿಯುವ ಏಕದೇವ ವಿಶ್ವಸನೀಯ ಪ್ರವಾದಿ ಮಹಮ್ಮದರ ಬೋಧನೆಗಳಿಗೆ ವಿಧೇಯಕರಾಗಿ ಜೀವನ ಸಾಗಿಸುವುದು ಅವಶ್ಯ. ಪ್ರತಿಯೊಬ್ಬ ಮುಸ್ಲಿಂ ವ್ಯಕ್ತಿ ಕೆಲವು ಮೂಲ ತತ್ವಗಳಲ್ಲಿ ಅಚಲವಾದ ವಿಶ್ವಾಸ ಇಡಬೇಕಾಗುತ್ತದೆ. ಅವುಗಳಲ್ಲಿ ಪ್ರಮುಖವಾಗಿ ದೈವತ್ವದಲ್ಲಿ ಒಬ್ಬನೇ ದೇವರು ಎಂಬ ನಂಬಿಕೆ. ದೇವದೂತರಲ್ಲಿ ನಂಬಿಕೆ. ಪವಿತ್ರವಾದ ಕುರ್‌ಆನ್ ಇಸ್ಲಾಂ ಧರ್ಮದ ಕೊನೆಯ ಅಂತಿಮ ಗ್ರಂಥ. ಮಹಮ್ಮದರು ಅಂತಿಮ ಪ್ರವಾದಿ. ಮರಣೋತ್ತರ ಜೀವನದ ಬಗ್ಗೆ ನಂಬಿಕೆ ಇಡುವುದು.

ಪ್ರತಿಯೊಬ್ಬ ಮುಸ್ಲಿಂ ಬಾಂಧವನು ನಿರ್ವಹಿಸಬೇಕಾದ ಕೆಲವು ಪ್ರಾಥಮಿಕ ಕರ್ತವ್ಯಗಳು ಇವೆ. ಸಲಹ್(ಪ್ರಾರ್ಥನೆ) ದಿನಂಪ್ರತಿ ಐದು ಬಾರಿ ಪ್ರಾರ್ಥನೆ ಮಾಡುವುದು ಪ್ರತಿಯೊಬ್ಬ ಮುಸ್ಲಿಂನ ಪ್ರಮುಖ ಕರ್ತವ್ಯ. ಸೌಮ್(ಉಪವಾಸ) ರಮಜಾನ ತಿಂಗಳಲ್ಲಿ ಬೆಳಗಿನಿಂದ ಸಂಜೆಯವರೆಗೆ ಉಪವಾಸ ಪ್ರತಿಯೊಬ್ಬರು ಮಾಡಬೇಕು. ಝುಕತ್ (ದಾನ ಮಾಡುವುದು)

ನಿರ್ದಿಷ್ಟ ಮಟ್ಟಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿ ಆದಾಯವನ್ನು ಪ್ರತಿಯೊಬ್ಬ ಮುಸ್ಲಿಂ ಬಾಂಧವನು ೨.೫% ವಾರ್ಷಿಕವಾಗಿ ದಾನ ಮಾಡುವುದು. ಹಜ್-ಮೆಕ್ಕಾಯಾತ್ರೆ ಮಾಡುವುದು. ಸಾಧ್ಯವಿದ್ದರೆ ಜೀವನದಲ್ಲಿ ಕನಿಷ್ಟ ಒಂದು ಬಾರಿಯಾದರು ಮೆಕ್ಕಾಕ್ಕೆ ಹೋಗುವುದು. ಹೀಗೆ ಮುಸ್ಲಿಂ ವರ್ಗದವರು ತಮ್ಮ ದೈನಂದಿನ ಜೀವನದಲ್ಲಿ ಇನ್ನೂ ಕೆಲವು ಆಚರಣೆ ಕರ್ತವ್ಯಗಳನ್ನು "ಶರಿಯತ್" ಎಂಬ ಚಾರಿತ್ರಿಕ ಸಂಬಂಧಿಸಿದ ನಿಯಮಗಳಿಗುಣವಾಗಿ ಪ್ರತಿಯೊಬ್ಬ ಮುಸ್ಲಿಂನು ಸಾಮೂಹಿವಾಗಿ ಜೀವನದುದ್ದಕ್ಕೂ ಬದ್ಧನಾಗಿ ಇವುಗಳನ್ನು ಆಚರಿಸುತ್ತಾರೆ. ಹೀಗೆ ಧಾರ್ಮಿಕ ಆರಾಧನಾ ಕೇಂದ್ರಗಳಾದ ಮಸೀದಿ, ದರ್ಗಾ, ಹಾಗೂ ಅಶ್ರೂಖಾನಗಳಲ್ಲಿ ಕೆಲವು ನಿಯಮ ಬದ್ಧವಾಗಿ ಆಚರಣೆಗಳನ್ನು ಮತ್ತು ಉತ್ಸವಗಳನ್ನು ಆಚರಿಸಲಾಗುತ್ತದೆ.

**ದರ್ಗಾಗಳಲ್ಲಿ ಕಂಡು ಬರುವ ಆಚರಣೆಗಳು**

ಹಳ್ಳಿಗಾಡಿನ ಮುಸ್ಲಿಂ ಮುಗ್ಧ ಜನರು ಧಾರ್ಮಿಕ ಅವಶೇಷಗಳ ಆರಾಧನೆಗಳನ್ನು ಸಾಧು ಸಂತರ ಸಮಾಧಿಗಳಿಗೆ ಭೇಟಿ ನೀಡುವ ಬಗೆಯನ್ನು ಕಾಣುತ್ತೇವೆ. ಆದಾಗ್ಯೂ ಭಾರತೀಯ ಮುಸ್ಲಿಂರು ಈ ಆರಾಧನೆಗಳನ್ನು ಕೈಕೊಳ್ಳುವುದಕ್ಕೆ ಪ್ರಮುಖವಾಗಿ ಎರಡು ಕಾರಣಗಳಿವೆ. ಹಿಂದೂಗಳ ಧಾರ್ಮಿಕ ಮತ್ತು ಸಾಮಾಜಿಕ ಆಚರಣೆಗಳ ಗಾಡವಾದ ಪ್ರಭಾವವು ಒಂದು ರೀತಿಯಾದರೆ ಸೂಫಿ ಸಂತರ ಮೇಲಿನ ಗೌರವ ಮತ್ತು ನೆನಪುಗಳು ಮತ್ತೊಂದು ರೀತಿಯ ಕಾರಣಗಳಾಗಿವೆ. ಇವಲ್ಲದೆ ಇನ್ನೂ ಅನೇಕ ಧಾರ್ಮಿಕ ಮತ್ತು ಸಾಮಾಜಿಕ ಆಚರಣೆಗಳು ಕಂಡು ಬಂದವು.

ಮಾನವರು ತನ್ನ ಸಂಸಾರದ ಜಂಜಾಟದಲ್ಲಿ ಬಿದ್ದು ದುಃಖಕ್ಕೆ ಈಡಾಗುತ್ತಾರೆ. ತನ್ನ ನಿತ್ಯದ ವ್ಯವಹಾರದಲ್ಲಿ ಅರಿತು ಅರಿಯದೆಯೋ ಹಲವು ತಪ್ಪುಗಳನ್ನು ಮಾಡಿ ಕಷ್ಟಕ್ಕೊಳಗಾದ ಅವನ ಜೀವನವು ಸಮಸ್ಯೆಗಳ ಸುಳಿಯಲ್ಲಿ ಸಿಲುಕಿಕೊಳ್ಳುತ್ತದೆ. ಈ ಸಮಸ್ಯೆಗಳಿಂದ ಹೊರಬರಲು ವಲಿ, ಔಲಿಯಾಗಳ ಬಳಿ ಬರುತ್ತಾರೆ. ಆ ಸಂತರು ನೊಂದ ಮಾನವರ ಪರವಾಗಿ ಅಲ್ಲಾಹನಲ್ಲಿ ಪ್ರಾರ್ಥಿಸಿ ಅವರಿಗೆ ಪರಿಹಾರ ನೆರವು ನೀಡಿ ಅವರನ್ನು ಮುಕ್ತರನ್ನಾಗಿ ಮಾಡುತ್ತಿದ್ದರು. ಹೀಗೆ ದರ್ಗಾಗಳಿಗೆ ನಡೆದುಕೊಳ್ಳುವ ಆಚರಣೆ ನಡೆದು ಬಂದಿತು.೧ ಹಿಂದೂ ವರ್ಗದವರು ದೇವಾಲಯಗಳಲ್ಲಿ ನಡೆದುಕೊಳ್ಳುವ ರೀತಿಯಲ್ಲಿ ದರ್ಗಾಗಳಿಗೂ ಕಾಯಿ, ಸಕ್ಕರೆ, ದೂಪ ವಿವಿಧ ಪದಾರ್ಥಗಳ ನೈವೇದ್ಯಗಳನ್ನು ನೀಡಿ ಆರಾಧಿಸುತ್ತಿದ್ದರು. ದರ್ಗಾಗಳಿಗೆ ಸುತ್ತು ಹಾಕುವುದು, ಹರಕೆಹೊರುವ ತೀರಿಸುವ ಆಚರಣೆಗಳನ್ನು ಪ್ರಾರಂಭಿಸಿದರು. ಹಿಂದೂಗಳ ಜೊತೆಯಾಗಿ ದರ್ಗಾಗಳಿಗೆ ದರ್ಶನ ಮಾಡಲು ಹೋಗುತ್ತಿದ್ದ ಮುಸ್ಲಿಂರು ಕ್ರಮೇಣವಾಗಿ ಈ ಆಚರಣೆಗಳನ್ನು ಅನುಸರಿಸತೊಡಗಿದರು. ಇವುಗಳಲ್ಲದೆ ಇನ್ನೂ ಅನೇಕ ವೈವಿಧ್ಯಮಯಗಳಿಂದ ಕೂಡಿದ

ಆಚರಣೆಗಳು ಆಯಾ ಪ್ರಾದೇಶಿಕ ಹಿನ್ನಲೆಯಲ್ಲಿ ವಿಭಿನ್ನವಾಗಿ ಕಂಡು ಬಂದವು. ಅವುಗಳಲ್ಲಿ ಕೆಲವೊಂದನ್ನು ವಿಶ್ಲೇಷಣಾತ್ಮಕವಾಗಿ ನೋಡಲಾಗಿದ್ದು ಅವು ಈ ಕೆಳಗಿನಂತಿವೆ.

**ಮಜಾರದ(ಗೋರಿ)ಸುತ್ತಲಿನ ಸರಪಳಿಗೆ ಮತ್ತು ಕಟಾಂಜನಗಳಿಗೆ ಕೀಲಿ ಹಾಕುವ ಸಂಪ್ರದಾಯ**

ಈ ರೀತಿಯ ಸಂಪ್ರದಾಯ ಹಲವು ದರ್ಗಾಗಳಲ್ಲಿ ಆಚರಿಸಲಾಗುತ್ತದೆ. ಈ ಸಂಪ್ರದಾಯದ ಹಿನ್ನೆಲೆ ಎಂದರೆ ಭಕ್ತರು ತಮ್ಮ ಸಮಸ್ಯೆಗಳನ್ನು ಆ ಸಂತನಲ್ಲಿ ಕೀಲಿಯ ರೂಪದಲ್ಲಿ ಒಪ್ಪಿಸುತ್ತಾರೆ. ತಮ್ಮ ಜೀವನವು ಕೀಲಿಯ ಹಾಗೆ ಭದ್ರವು ಶಾಶ್ವತವು ಆಗಿರಲೆಂದು ಹಾಗೂ ಸುಖಕರವಾಗಿರಲೆಂದು ಬೇಡಿಕೊಳ್ಳುತ್ತಾ ಕೀಲಿ ಹಾಕುವುದುಂಟು.

**ದರ್ಗಾದ ಮರಗಳಿಗೆ ನೂಲು ಸುತ್ತುವ ಆಚರಣೆ**

ದರ್ಗಾಕ್ಕೆ ಬರುವಂತಹ ಭಕ್ತರು ವಿವಿಧ ಬೇಡಿಕೆಗಳನಿಟ್ಟುಕೊಂಡು ದರ್ಗಾದ ಆವರಣ ದಲ್ಲಿರುವ ಮರಗಳಿಗೆ ದಾರ ಸುತ್ತಿ, ಸುತ್ತಿನ ಕೊನೆಗೆ ತಮ್ಮ ಕಷ್ಟಗಳು ಪರಿಹಾರವಾಗಲಿ ಎನ್ನುವ ರೀತಿಯಲ್ಲಿ ಮೂರು ಗಂಟುಗಳನ್ನು ಹಾಕುವ ಪದ್ದತಿವುಂಟು ಉತ್ತರ ಕರ್ನಾಟಕದ ಭಾಗದಲ್ಲಿ ಈ ಆಚರಣೆ ಕಂಡು ಬರುತ್ತದೆ.

**ದೀರ್ಘದಂಡ ನಮಸ್ಕಾರ ಮತ್ತು ಉರುಳು ಸೇವೆಯ ಆಚರಣೆಗಳು**

ಉತ್ತರ ಕರ್ನಾಟಕದ ಭಾಗದಲ್ಲಿ ಭಕ್ತರು ತಮ್ಮ ಹಲವು ಸಮಸ್ಯೆಗಳು ಪರಿಹಾರವಾಗಲೆಂದು ಬೇಡಿಕೊಂಡು ದೀರ್ಘದಂಡ ನಮಸ್ಕಾರದ ಹರಕೆ ಹೊರುತ್ತಾರೆ. ಅದನ್ನು ಗ್ರಾಮೀಣ ಭಾಗದಲ್ಲಿ ದಿಡನಮಸ್ಕಾರ ಎಂದು ಗ್ರಾಮೀಣ ಆಡುಭಾಷೆಯಲ್ಲಿ ಕರೆಯುತ್ತಾರೆ. ಈ ಆಚರಣೆಯಲ್ಲಿ ಸ್ತ್ರೀ ಪುರುಷರಿಬ್ಬರು ಪಾಲ್ಗೊಳ್ಳುವುದುಂಟು.

**ದರ್ಗಾದ ಕಟಾಂಜನ ಮತ್ತು ಮರಗಳಿಗೆ ಬಳೆಗಳನ್ನು ಕಟ್ಟುವ ಸಂಪ್ರದಾಯ**

ಬಳೆಗಳನ್ನು ಕಟ್ಟುವ ಸಂಪ್ರದಾಯವು ವಿಶೇಷವಾಗಿ ಮಹಿಳೆಯರಿಂದ ಮಾತ್ರ ಆಚರಿಸಲ್ಪಡುವದುಂಟು. ಸ್ತ್ರೀಯರು ತಮ್ಮ ನಂಬಿಕೆ ಹಾಗೂ ಇಷ್ಟಾರ್ಥಗಳು ಈಡೇರಲೆಂದು ಬಳೆಗಳನ್ನು ಕಟ್ಟುವ ಪದ್ಧತಿ ಬೆಳೆದು ಬಂದಿದೆ.

**ದರ್ಗಾಗಳಲ್ಲಿ ದೀಪ ಹಚ್ಚುವ ಪದ್ಧತಿ**

ದರ್ಗಾಗಳಲ್ಲಿ ವಿದ್ಯುತ್ ದೀಪಗಳು ಬರುವ ಪೂರ್ವದಲ್ಲಿ ಸಂತರ ಉರುಸುಗಳಲ್ಲಿ ಚಿರಾಗ(ದೀಪ)ವೆಂಬ ಆಚರಣೆ ವಿಧಿವತ್ತಾಗಿ ಆಚರಿಸಲ್ಪಡುತ್ತಿತ್ತು. ಅಂದು ದರ್ಗಾದ ಒಳಗೂ ಹೊರಗು ಎಣ್ಣೆದೀಪ ಹಚ್ಚಿ ಬೆಳಕಿನ ಉತ್ಸವನ್ನಾಗಿ ಆಚರಿಸುತ್ತಿದ್ದರು. ಈಗಲೂ ಕೆಲವು ದರ್ಗಾಗಳಲ್ಲಿ ದೀಪವನ್ನು ಬಳಸಲಾಗುತ್ತದೆ.

## ಇನ್ನಿತರ ಆಚರಣೆಗಳು

ಕೆಲವು ದರ್ಗಾಗಳಲ್ಲಿ ತಿಳಿಹಳದಿ ಹರಳಿನ ಉಂಗುರವನ್ನು ದೃಷ್ಟಿದೋಷ ನಿವಾರಣೆಗಾಗಿ ಬಳಸುತಿರುವುದನ್ನು ಕಾಣಬಹುದು. ಇನ್ನೂ ಕೆಲವು ದರ್ಗಾಗಳಲ್ಲಿ ಮುಜಾವರರು ಕರಿ ಮತ್ತು ಕೆಂಪು ಲಾಡಿಗಳನ್ನು ಮಂತ್ರಿಸಿ ಕಟ್ಟುವುದನ್ನು ಕಾಣಬಹುದಾಗಿದೆ.

ಈ ಮೇಲಿನ ಆಚರಣೆಗಳಲ್ಲದೆ ಇನ್ನೂ ಹಲವಾರು ಆಚರಣೆಗಳು ಆಯಾ ಪ್ರದೇಶದ ಸಮಾಜದ ಆಚರಣೆಗಳ ಹಿನ್ನಲೆಯಲ್ಲಿ ಬಳಕೆಯಲ್ಲಿರುವುದು. ಮುಸ್ಲಿಂಮರ ಆಚರಣೆಗಳನ್ನು ಪ್ರತ್ಯೇಕವಾಗಿ ಗುರುತಿಸಲಾರದಷ್ಟು ಸಮಷ್ಠಿ ಸಂಸ್ಕೃತಿ ಬೆರೆತು ರೂಪಗೊಂಡಿರುವುದು.[೨]

## ಉರುಸು

ಇಸ್ಲಾಂ ಧರ್ಮದ ಮುಂದಿನ ಹೆಜ್ಜೆಯಾಗಿ ಬೆಳದು ಬಂದ ಪಂಥ ಸೂಫಿ. ಇದರ ಬೇರುಗಳು ಇಸ್ಲಾಂ ಧರ್ಮದಲ್ಲಿವೆ. ಭಾರತದಲ್ಲಿ ಸೂಫಿಪಂಥ ಬೆಳೆದು ಬಂದ ಮಾರ್ಗವನ್ನು ಅವಲೋಕಿಸಿದಾಗ ಅದು ಹಿಂದೂ ಸಂಸ್ಕೃತಿಯಿಂದ ಸಮ್ಮಿಲನಗೊಂಡಿದ್ದು ಸ್ಪಷ್ಟವಾಗಿ ಗೋಚರಿಸುತ್ತದೆ. ಭಾರತೀಯರ ಹಿನ್ನೆಲೆಯಲ್ಲಿ ನೋಡಿದರೆ ಸೂಫಿಪಂಥವು ಜನ ಮೂಲವಾಗಿ ಬೆಳದು ಅದು ಇಸ್ಲಾಂ ಧರ್ಮಕ್ಕಿಂತ ಭಿನ್ನವಾದ ಹಾದಿಯನ್ನು ಸೃಷ್ಟಿಸುವುದಕ್ಕೆ ಭಾರತೀಯ ಸಂಸ್ಕೃತಿಕರಣವೇ ಕಾರಣ. ಹೀಗಾಗಿ ಅದು ಒಂದು ಧಾರ್ಮಿಕ ಆಂದೋಲನವಾಗದೆ ಸಮಾಜ ಸುಧಾರಣಾ ಚಳುವಳಿಯಾಗಿ ರೂಪಾಂತರಗೊಂಡಿತು ಎನ್ನಬಹುದು. ಮುಸ್ಲಿಂ ದೇಶಗಳಿಂದ ಭಾರತಕ್ಕೆ ಬಂದ ಸೂಫಿಗಳು ಸ್ಥಳೀಯ ಜನತೆಯೊಂದಿಗೆ ಒಂದಾಗಿ ಬೆರೆತು "ಲೋಕವೇ ನನ್ನ ಮನೆ ಮಾನವ ಕುಲವೇ ನನ್ನ ಕುಟುಂಬ" ಮಾನವರೆಲ್ಲ ಒಗ್ಗಟ್ಟಿನಿಂದ ಬಾಳಿ ಬದುಕಬೇಕು, ಎಂಬ ಹೊಸ ವಾತವರಣವನ್ನು ನಿರ್ಮಿಸಲು ಹೆಣಗಿದ ಸೂಫಿಪಂಥವಾಗಿದೆ. ಈ ಪಂಥದ ಸಂತರು ಸಹನೆ, ತಾಳ್ಮೆ, ಸಹಾನುಭೂತಿ, ಉತ್ಸಾಹ ಪರಸ್ಪರರಲ್ಲಿ ಸಾಮರಸ್ಯ ಮತ್ತು ಸ್ನೇಹಪರ ಭಾವಣೆಗಳನ್ನು ಮೈಗೂಡಿಸಿಕೊಂಡು ಅವರಿಗೆ ಹಿಂದೂ ಅನುಯಾಯಿಗಳು ದೊರಕಿದ್ದು ಸ್ಮರಣೀಯ. ಅನೇಕ ಸೂಫಿ ಸಂತರು ತಮ್ಮ ಸುವಾರ್ತೋಪದೇಶಗಳಿಗೆ ಸಂಬಂಧಿಸಿದ ಉತ್ಸಾಹದ ಜೊತೆಗೆ ಭಾರತದ ತತ್ವಶಾಸ್ತ್ರಗಳ ಹಾಗೂ ಧರ್ಮಗಳ ತೌಲನಿಕ ಅಧ್ಯಯನಕ್ಕೆ ತಮ್ಮನ್ನು ಪೂರ್ಣವಾಗಿ ತೊಡಗಿಸಿಕೊಂಡವರು. ಹೀಗಾಗಿ ಸೂಫಿಗಳು ಭಾರತದ ಆಧ್ಯಾತ್ಮದೊಡನೆ ಬೆರೆತು ಸರ್ವರನ್ನು ಧರ್ಮ ಮಾರ್ಗದಲ್ಲಿ ಕೊಂಡೊಯ್ಯುವವರಲ್ಲಿ ಹಿಂದೂ ಮುಸ್ಲಿಂರಲ್ಲಿ ಸಹೋದರತ್ವ, ಸ್ನೇಹ, ಸಹಾನುಭೂತಿ ಹಾಗೂ ಮಾನವ ಐಕ್ಯತೆಯ ಭಾವಣೆಗಳನ್ನು ಒಡಮೂಡಿಸುವಲ್ಲಿ ಸಫಲತೆ ಹೊಂದಿದರು.

ಇಸ್ಲಾಂ ಧರ್ಮದಲ್ಲಿಯೂ ಮಹಾನ ಪವಾಡ ಪುರುಷರು ಅವತರಿಸಿ ಅಂದಕಾರದಲ್ಲಿರುವರಿಗೆ ಸನ್ಮಾರ್ಗದಲ್ಲಿ ಜೀವನ ನಡೆಯಲು ಬೆಳಕನ್ನು ನೀಡಿರುವಂತಹ ಮಹಾಪುರಷರು ವಲಿ, ಸಾಧಕ, ಸಂತ, ಯೋಗಿಗಳೆಂದು ಕರೆಯಲ್ಪಡುವರು. ಹಿಂದೂ ದಾರ್ಶನಿಕರ, ಶಿವಶರಣರ, ಹರಿದಾಸರ ಪುಣ್ಯತಿಥಿಗಳಂತೆ ಸೂಫಿ ಸಂತರ ಐಕ್ಯದಿನವನ್ನು ಪುಣ್ಯತಿಥಿಯನ್ನಾಗಿ ದೇಶದ ತುಂಬೆಲ್ಲಾ ಚಿಕ್ಕ ಚಿಕ್ಕ ಹಳ್ಳಿಗಳಿಂದ ಹಿಡಿದು ನಗರ ಪಟ್ಟಣಗಳಲ್ಲಿ ಬಹುಕಾಲದಿಂದ ಉತ್ಸಾಹದಿಂದ ಆಚರಿಸುತ್ತಲೇ ಬಂದಿರುವುದು ಕಂಡು ಬರುತ್ತದೆ. ಅದಕ್ಕೆ ಉರುಸು ಎಂದು ಕರೆಯಲಾಗುತ್ತದೆ. ಉರುಸು ಅಂದರೆ ಹುತಾತ್ಮರ ಪುಣ್ಯ ದಿನಾಚರಣೆಯಾಗಿದೆ. ಅದಕ್ಕೆ ಜಾತ್ರೆ, ಉತ್ಸವ ಎಂದು ಬೇರೆ ಬೇರೆ ಅರ್ಥಗಳಂಟು.

**ಉರುಸು ಪದದ ಅರ್ಥ**

ಕನ್ನಡದ ಉರುಸು ಎಂಬ ಪದವು ಹಿಂದಿಯಲ್ಲಿ ಉರಸ್ ಎಂದು ಬಳಕೆಯಾಗುತ್ತದೆ. "ಉರುಸು" ಎಂದರೆ ಜಾತ್ರೆ, ಉತ್ಸವ, ಮಹೋತ್ಸವ, ಪುಣ್ಯತಿಥಿ ಎಂಬ ಅರ್ಥಗಳಿವೆ. ಉರುಸು ಶಬ್ದದ ಕುರಿತು ವಿವಿಧ ವಿದ್ವಾಂಸರು ತಮ್ಮದೇ ಆದ ವ್ಯಾಖ್ಯೆಗಳನ್ನು ಅಭಿವ್ಯಕ್ತಪಡಿಸಿದ್ದಾರೆ. ಉರುಸು ಎಂದರೆ ಸಾಮಾನ್ಯವಾಗಿ ಸಾಧು ಸಂತರ ಪುಣ್ಯತಿಥಿ, ಹುತಾತ್ಮರ ಪುಣ್ಯ ದಿನಾಚರಣೆ, ಜಾತ್ರೆ, ಉತ್ಸವ ಮುಂತಾದ ಹೆಸರುಗಳಿಂದ ಕರೆಯುತ್ತಾರೆ.

**ಉರುಸು-ಉತ್ಸವದ ವಿಧಿ ಕ್ರಿಯೆಗಳು**

**ಉರುಸ್‌ನ ವಿಧಿ ಕ್ರಿಯೆಗಳು**

ಭಾರತೀಯರು ಮುಸ್ಲಿಂ ಸಾಧುಗಳು, ಸೂಫಿಸಂತರ, ವಲಿಗಳ ಆರಾಧನೆಯಲ್ಲಿ ತೊಡಗುವುದಕ್ಕೆ ಅವರ ಮಧ್ಯೆ ಬದುಕಿ ಬಾಳಿದ ಸೂಫಿ ಸಂತರ ಅದ್ಭುತ ಕರಾಮತ(ಪವಾಡ)ಗಳು ಹಾಗೂ ಸಂತರ ಮೇಲಿರುವ ಪ್ರೀತಿ ಗೌರವ ಮತ್ತು ನೆನಪುಗಳು ಪ್ರಮುಖ ಕಾರಣಗಳಾಗಿವೆ. ಮುಸ್ಲಿಂರಂತೆ ಹಿಂದೂಗಳು ಸಹ ಸೂಫಿ ಸಂತರ ದರ್ಗಾಗಳಿಗೆ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಅವರು ದರ್ಗಾದ ಗೋರಿಗಳಿಗೆ ಹೂ, ಅಗರಬತ್ತಿ, ಸಕ್ಕರೆ, ಕಾಯಿ ಇತ್ಯಾದಿಗಳ ಮೂಲಕ ಪೂಜೆ ಸಲ್ಲಿಸಿ ಫಾತಿಹಾ(ಕುರಾನ) ಓದಿಸಿ ಹರಕೆ ಹೊರುವರು. ಇಸ್ಲಾಂ ಧರ್ಮದಲ್ಲಿ ದರ್ಗಾದ ಮಜಾರ(ಸಮಾಧಿಗಳಿಗೆ) ನಮಸ್ಕರಿಸುತ್ತಾರೆ. ಮುಗ್ಧ ಮುಸ್ಲಿಂರು ಚಾಧರ ಹೊದಿಸುವದು, ಹೂ ಏರಿಸುವುದು, ಅಗರಭತ್ತಿ ಹಚ್ಚುವುದು, ಹರಕೆ ಹೊರುವುದು ಮುಂತಾದ ಆಚರಣೆಗಳನ್ನು ಬಹುಕಾಲದಿಂದ ನಡೆಸಿಕೊಂಡು ಬಂದಿದ್ದನ್ನು ಕಾಣುತ್ತೇವೆ.

ಉರುಸು ಹಬ್ಬವನ್ನು ಎರಡು ಪ್ರಮುಖ ವಿಧಿಗಳಲ್ಲಿ ಆಚರಿಸಲ್ಪಡುತ್ತದೆ. ೧. ಸಂದಲ್ ೨) ಉರುಸು ಎಂಬ ಘಟಕದಿಂದ ಕೂಡಿರುವುದು.

**ಸಂಧಲ್**

ಗಂಧವನ್ನು ಪರಂಪರೆಯಾಗಿ ಒಂದು ಸ್ಥಳದಿಂದ ಒಂದು ಪದಾರ್ಥದಲ್ಲಿ ಮಾಡಿದ ಬುಟ್ಟಿಯಲ್ಲಿ ಅಥವಾ ಪಾತ್ರೆಯಲ್ಲಿ ಶ್ರೀಗಂಧವನ್ನಿಟ್ಟು ಅದರ ಮೇಲ್ಗಡೆ ಹಸಿರು ವಸ್ತ್ರವನ್ನು ಹೊದಿಸುವರು. ಆಯಾ ಊರಿನ ಪ್ರಮುಖ ವ್ಯಕ್ತಿ ಅಥವಾ ಆಯಾ ದರ್ಗಾದ ಫಕೀರರ ತಲೆಯ ಮೇಲೆ ಹೊದಿಸಿಕೊಂಡು ಬರುವ ವಾಡಿಕೆವುಂಟು. ಬ್ಯಾಂಡು ಭಜಂತ್ರಿಗಳಿಂದ ಕೂಡಿದ ವಿಜೃಂಭಣೆ ಮೆರವಣಿಗೆಯು ಆಯಾ ಊರು ನಗರ ಪಟ್ಟಣಗಳ ಮುಖ್ಯ ಬೀದಿಗಳಲ್ಲಿ ಹಾಯ್ದು ದರ್ಗಾಕ್ಕೆ ಬರುವುದು. ಹಾಗೆ ಬರುವಾಗ ಭಕ್ತರು ದಾರಿಯ ಮಧ್ಯದಲ್ಲಿ ಗಂಧ ಹೊತ್ತವರ ಕಾಲಿಗೆ ನೀರನ್ನು ಹೊಯ್ದು ಸಕ್ಕರೆ, ಲೋಬಾನದಿಂದ ನೈವೇಧ್ಯ ಮಾಡಿಸುವರು. ಹೀಗೆ ಮೆರವಣಿಗೆಯಲ್ಲಿ ವಿವಿಧ ಭಕ್ತರಿಂದ ಕಸರತ್ತಗಳು ನಡೆದು ಬರುತ್ತವೆ. ಹೀಗೆ ವೈಭವದ ದೃಶ್ಯ ಭಕ್ತರ ಸಡಗರ ಮತ್ತು ಭಕ್ತಿ ಪೂರ್ವಕ ದೃಶ್ಯಗಳು ಅಲ್ಲಿ ಕಂಡು ಬರುತ್ತವೆ. ಸಂದಲ್‌ದ ಮೆರವಣಿಗೆಯು ದರ್ಗಾಕ್ಕೆ ಬಂದ ನಂತರ ಮೌಲಾನಾಗಳಿಂದ ಫಾತಿಹಾ (ಕುರಾನ ಶ್ಲೋಕ ಪಠಣ) ಆದ ಮೇಲೆ ದರ್ಗಾದ ಒಳಗಡೆ ಹೋಗುವ ಸಂಪ್ರದಾಯವಿದೆ. ಅಂದು ಇಡಿ ರಾತ್ರಿ ಸಂಧಲ್ ಹಾಗೂ ಸುಗಂಧ ದ್ರವ್ಯಗಳಿಂದ ದರ್ಗಾದಲ್ಲಿಯ ಗೋರಿಯನ್ನು ಶುಚಿಗೊಳಿಸಲಾಗುತ್ತದೆ. ಅದೇ ರಾತ್ರಿ ಕವ್ವಾಲಿ, ಸಂಗೀತ ಕಾರ್ಯಕ್ರಮ ಏರ್ಪಡಿಸಿರುವದಲ್ಲದೆ ಈ ಕಾರ್ಯಕ್ರಮವನ್ನು ಕೆಲವು ದರ್ಗಾಗಳಲ್ಲಿ ಮೂರು ದಿನಗಳವರೆಗೆ ನಡೆಯುತ್ತದೆ. ಹೀಗೆ ಸಾಮಾನ್ಯವಾಗಿ ಪ್ರತಿಯೊಂದು ಉರುಸ್‌ನಲ್ಲಿ ಹೆಚ್ಚು ಕಡಿಮೆ ನಡೆಯುವ ಸಂಧಲ್‌ದ ವಿಧಿವಿಧಾನಗಳಾಗಿವೆ.

**ಉರುಸು**

ಸಂದಲ್‌ದ(ಗಂಧ) ಮಾರನೆಯ ದಿನವೇ ಉರುಸಿನ ದಿನವಾಗಿರುತ್ತದೆ. ಅಂದು ಬೆಳಿಗ್ಗೆ ದರ್ಗಾದ ಗೋರಿಗೆ ಫೀರರ ಶಿಷ್ಯರು, ಹಾಗೂ ಭಕ್ತರಿಂದ ಪುಷ್ಪಗಳಿಂದ ಅಲಂಕರಿಸಿದ ಮೇಲೆ ಉರುಸಿನ ಸಮಾರಂಭದಲ್ಲಿ ಜಾತಿ, ಮತ, ಮೇಲು, ಕೀಳುಗಳೆಂಬ ಭೇದಭಾವವಿಲ್ಲದೆ ಏಕಮನೋಭಾವದಿಂದ ಭಕ್ತರೆಲ್ಲ ಸೇರುವರು. ಹಿಂದೂಗಳು ಫಾತಿಯಾ ಓದಿಸಿ ನೈವೇದ್ಯ ಮಾಡಿಸುವರು. ಅಂದು ಕುರ್‌ಆನ್ ಪಠಣ ಸಮಾ(ಭಜನೆ)ಗಳು ಏರ್ಪಡುತ್ತವೆ. ನಂತರ ಸಂತರ ಜೀವನ ಕುರಿತು ಭಗವಂತನ ಗುಣಗಾಣಗಳನ್ನು ಒಳಗೊಂಡ ಕವ್ವಾಲಿ, ಗಜಲ್, ಸಂಗೀತ ಕಾರ್ಯಕ್ರಮ ಇರುತ್ತವೆ. ಈ ಪದ್ಧತಿಯನ್ನು ಪ್ರಾಂತೀಯವಾಗಿ ಅಲ್ಪ ಸ್ವಲ್ಪ ಭಿನ್ನತೆಯಿದ್ದರು ಉರುಸಿನ ದಿನ ನಡೆಯುವ ಸಾಮಾನ್ಯ ಕಾರ್ಯಕ್ರಮಗಳಾಗಿವೆ.

ಉರುಸಿನ ಆಚರಣೆಗಳು ಧಾರ್ಮಿಕ ವಿಧಿವಿಧಾನಗಳು ಪ್ರಾಂತೀಯವಾಗಿ ಹಾಗೂ ಕಾಲಕ್ಕನುಗುಣವಾಗಿ ಬದಲಾವಣೆ ಆಗುತ್ತ ಬಂದಿರುವುದು ಕಂಡು ಬರುತ್ತದೆ. ಹಿಂದೂ

ಸಂಸ್ಕೃತಿಯ ಸಮ್ಮಿಲನದಿಂದ ಉರುಸುನಲ್ಲಿ ಭಾರತೀಕರಣವನ್ನು ಕಂಡುಕೊಳ್ಳಬಹುದು. ಈ ಉರುಸು ಕೋಮು ಸೌಹಾರ್ದತೆಯ ಮತೀಯ ಸಾಮರಸ್ಯದ ಜೀವಂತ ನಿದರ್ಶನವಾಗಿದೆ.

ನನ್ನ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಬೆಳಗಾವಿ ನಗರದಲ್ಲಿ ನಡೆದ ಬದ್ರುದ್ಧೀನ ಚಿಸ್ತಿ (ಆರಿಫ್)ರ ಉರುಸು ಆಚರಣೆ ಕುರಿತು ಇಲ್ಲಿ ವಿವರಸಲಾಗಿದೆ.

**ಹಜರತ್ ಸಯ್ಯದ್ದೀನ ಶಹಾ ಬದ್ರುದ್ದೀನ ಚಿಸ್ತಿಯವರ ಉರುಸು**

ಚಿಸ್ತಿಯವರು ಬೆಳಗಾವಿಗೆ ಬಂದ ಮೊದಲ ಸೂಫಿಸಂತ ಎನ್ನಲಾಗಿದೆ. ಇವರು ದೇವನಲ್ಲಿ ಭಕ್ತಿ ಮತ್ತು ಧ್ಯಾನದ ಮೂಲಕ ಐಕ್ಯತೆ ಸಾದಿಸುವುದೇ ಸೂಫಿ ಪಂಥದ ಮುಖ್ಯ ಧ್ಯೇಯ ಎಂದು ಅರುಹಿ, ಆಧ್ಯಾತ್ಮ ಜ್ಞಾನ ಮಾರ್ಗದ ಮೂಲಕ ದೇವನಲ್ಲಿ ಲೀನವಾದ ಸಂತರು. ಜನರ ಒಳತನ್ನು ಬಯಸಿ ಮಾನವನ ಕಲ್ಯಾಣಕ್ಕಾಗಿ ಶ್ರಮಿಸಿದ ಪವಾಡ ಪುರುಷರೆನಿಸಿದರು. ಬೆಳಗಾವಿ ನಗರದ ಪ್ರಮುಖ ಸಂತರಲ್ಲಿ ಹಜರತ್ ಸಯ್ಯುದ್ಧೀನ ಶಹಾ ಬಹ್ರುದ್ಧೀನ ಚಿಸ್ತಿಯವರು ಒಬ್ಬರಾಗಿದ್ದಾರೆ. ಈ ದರ್ಗಾಕ್ಕೆ ಬೆಳಗಾವಿ ನಗರ ಹಾಗೂ ಅದರ ಸುತ್ತಮುತ್ತಲಿನ ಜನರು ಭೇಟಿ ನೀಡುತ್ತಾರೆ. ಬದ್ರುದ್ಧೀನವರು ಚಿಸ್ತಿ ಸಂಪ್ರದಾಯದವರು. ಇವರು ಹಿಜರಿ ಶಕೆ ೬೩೩ ರಜಬ್ ೧೦ ರಂದು ಕ್ರಿ.ಶ, ೧೪೨೦ ರಲ್ಲಿ ವಫಾತ್(ಐಕ್ಯ)ರಾದರು. ಪ್ರತಿವರ್ಷವು ಈ ದಿನದಂದು ಉರುಸು ಹಬ್ಬವನ್ನು ವಿಜೃಂಭನೆಯಿಂದ ನೇರೆವೇರಿಸಿದರು. ಈ ಉರುಸು ಹಬ್ಬವನ್ನು ಸುಮಾರು ೧೦ ದಿನಗಳವರೆಗೆ ಆಚರಿಸಲಾಗುತ್ತದೆ. ನಾನು ಕ್ಷೇತ್ರಕಾರ್ಯ ಕೈಕೊಂಡಾಗ ಈ ಚಿಸ್ತಿಯವರ ೭೮೭ ನೇ ಉರುಸು ಹಬ್ಬವನ್ನು ಮೇ ೬, ೨೦೧೪ ರಂದು ಪ್ರಾರಂಭಿಸಲಾಯಿತು.

ಮೇ ೦೬ ಹಿಜರಿ ಶಕೆ ರಜಬ್ ೬ ರಂದು ಖಾಜಿ ಕೀ ಚಟ್ಟಿ ಎಂದು ಆಚರಿಸಲಾಯಿತು. ಅಜ್ಮೀರದ ಹಜರತ ಖ್ವಾಜಾ ಮೊಯಿನುದ್ಧೀನ ಚಿಸ್ತಿಯವರ ಹೆಸರಿನಲ್ಲಿ ಅನ್ನ ಪ್ರಸಾದ ಕಾರ್ಯಕ್ರಮವನ್ನು ಪ್ರತಿ ತಿಂಗಳು ಹತ್ತುರಂದು ಆಚರಿಸಲಾಗುತ್ತದೆ. ಹಿಜರಿ ಶಕೆ ರಜಬ್ ೦೯, ಮೇ ೯ ರಂದು ಪರಾಸಿ ಮಜಾರ(ಗೋರಿ)ನ್ನು ಪವಿತ್ರಗೊಳಿಸುವ ಒಂದು ಕಾರ್ಯಕ್ರಮ. ಪರಾಶಿ ದಿನದಂದು ಮೌಲ್ವಿಗಳು, ಮುಜಾವರವರು ದರ್ಗಾದಲ್ಲಿ ಸು ಸಂಜೆ ೭ ಗಂಟೆಗೆ (ಮಜಾರ) ಗೋರಿಯನ್ನು ಗುಲಾಬಿ ಹೂವಿನ ನೀರಿನಿಂದ (ಗುಸುಲ್) ಪವಿತ್ರಗೊಳಿಸಲಾಗುವುದು. ಅದೇ ರಾತ್ರಿ ಗದ್ದುಗಿಗೆ ಹೊಸ ಬಿಳಿ ಬಟ್ಟೆಯನ್ನು ಹೊದಿಸಲಾಗುವುದು. ಪರಾಸಿಗೆ ಬಂದಂತಹ ಎಲ್ಲ ಸಂತರು ಗಂಧ ಲೇಪಿಸಿ ಕುರಾನ ಶ್ಲೋಕಗಳನ್ನು ಪಠಿಸುತ್ತಾ ಸುಮಾರು ೩ ಗಂಟೆಗಳ ಕಾಲ ಪ್ರಾರ್ಥನೆ ಮಾಡಲಾಗುತ್ತದೆ. ನಂತರ ಭಕ್ತರಿಗೆ ಸಿಹಿ ಅಥವಾ ಅನ್ನಪ್ರಸಾದ ಹಂಚಲಾಗುತ್ತದೆ.

(ಸಂದಲ್) ರಜಬ್ ೧೧ರಂದು ಸಂದಲ್ ಕಾರ್ಯಕ್ರಮವು ಸಕಲ ಸಿದ್ಧತೆಗಳೊಂದಿಗೆ ಮುಜಾವರ ಮನೆಯಿಂದ ಈ ವಂಶದ ಒಬ್ಬ ವ್ಯಕ್ತಿ ಈ ಸಂದಲ್ ಪೆಟ್ಟಿಗೆಯನ್ನು ಕುದುರೆ ರಥದಲ್ಲಿ ಕುಳಿತು ಬರುವ ರೂಢಿಯು ಮುಂದುವರೆದಿದೆ. ಈ ಸಂಧಲ್ ಮೆರವಣಿಗೆ ಮುಂಭಾಗದಲ್ಲಿ ಫಕೀರರು ಅವರ ಕರಾಮತ ಪವಾಡಗಳನ್ನು ಮತ್ತು ಕುರ್‌ಆನ್ ಶ್ಲೋಕಗಳನ್ನು ಪಠಿಸುತ್ತಾ ಹಾಗೂ ಬಾಜಾ ಭಜಂತ್ರಿ ಬ್ಯಾಂಡಿನವರಿಂದ ವಿವಿಧ ರೀತಿಯ ಮಜಲುಗಳು ಮೊಳಗುತ್ತವೆ. ಈ ಸಂದಲ್ ಮೆರವಣಿಗೆ ದರ್ಗಾಕ್ಕೆ ಪ್ರವೇಶಿಸಲು ಸುಮಾರು ೭ ಗಂಟೆಯಾಯಿತು. ಹೀಗೆ ಸಾಗಿ ಬಂದ ಮೆರವಣಿಗೆಯನ್ನು ಸಾಮೂಹಿಕ (ಫಾತಿಹಾ)ದೊಂದಿಗೆ ದರ್ಗಾದೊಳಗೆ ಪ್ರವೇಶಿಸುವುದು. ನಂತರ ಸಾಕಷ್ಟು ಭಕ್ತರು ದರ್ಗಾಕ್ಕೆ ಸಾಲಾಗಿ ಪ್ರವೇಶಿಸಿ ನಂತರ ಮುಜಾರ (ಗೋರಿ)ಗೆ ದರ್ಶನ ನೀಡಿ ಹೂ, ಗಂಧ, ಸುಗಂಧ ದ್ರವ್ಯಗಳನ್ನು ಹಚ್ಚಿ ದುವಾ(ಪ್ರಾರ್ಥನೆ) ಸಲ್ಲಿಸುವರು. ನಂತರ ಪ್ರಸಾದ ಸ್ವಿಕರಿಸಿ ಕವ್ವಾಲಿ, ರಿವಾಯತ್, ಸಮಾ ಆಚರಿಸಲಾಗುತ್ತದೆ.

ಸಂದಲ್‌ನ ಮರುದಿನ ಎಲ್ಲ ಜನವರ್ಗದವರು ದರ್ಗಾಗೆ ಭೇಟಿ ನೀಡಿ ಪ್ರಾರ್ಥನೆ ಸಲ್ಲಿಸಿ ಭಕ್ತರಿಗೆ ಸಿಹಿ ಹಂಚುತ್ತಾ ಅನ್ನ ಪ್ರಸಾದ (ಮಾಂಸಹಾರ ಅಥವಾ ಸಸ್ಯಾಹಾರ) ಕಾರ್ಯಕ್ರಮ ನಡೆಯುತ್ತದೆ. ಸುಮಾರು ನಾಲ್ಕು ದಿನಗಳ ಕಾಲ ಭಕ್ತರ ದರ್ಶನಕ್ಕೆ ದರ್ಗಾ ತೆರೆಯಲಾಗುತ್ತದೆ. ಆದರೆ ದರ್ಗಾದ ಒಳಗಡೆ ಸ್ತ್ರೀಯರಿಗೆ ಪ್ರವೇಶ ವಿರುವುದಿಲ್ಲ. ಈ ರೀತಿಯಾಗಿ ದರ್ಗಾಗಳಲ್ಲಿ ವಿವಿಧ ಆಚರಣೆಗಳು ಪ್ರಾದೇಶಿಕ ಅನುಗುಣವಾಗಿ ಬದಲಾವಣೆ ಸ್ವರೂಪತೆ ಪಡೆದುಕೊಂಡಿವೆ. ಇಸ್ಲಾಂ ಧರ್ಮವನ್ನು ತಮ್ಮದಾಗಿಸಿಕೊಳ್ಳುವಲ್ಲಿ ಅಲ್ಲಾನ ಸಂದೇಶಗಳಂತೆ ಮುಸ್ಲಿಂ ವರ್ಗದವರು ನಡೆದುಕೊಳ್ಳುತ್ತಾರೆ. ಸಮಸ್ತರು ಸುಖಜೀವನ ನಡೆಸಲು ಕೆಲವು ಸಿದ್ಧಾಂತಗಳಲ್ಲಿ ನಂಬಿಕೆ ಇಡುತ್ತಾರೆ.

**ಮಸೀದಿಗಳಲ್ಲಿ ಕಂಡುಬರುವ ಆಚರಣೆಗಳು**

ಮಸೀದಿಗಳು ಇಸ್ಲಾಂ ಧರ್ಮ ಸ್ಥಾಪಕರು ಅರೇಬಿಯಾದ ಮದೀನಾದಲ್ಲಿ ವಾಸಿಸುತ್ತಿದ್ದ ಮನೆಯ ವಿಸ್ತ್ರತ ರೂಪವೇ ಮಸೀದಿಯ ಮೂಲ ಕಲ್ಪನೆ. ಈ ಮಸೀದಿಗಳಲ್ಲಿ ದಿನಾಲು ಐದು ಬಾರಿ ಮುಸ್ಲಿಂ ವರ್ಗದವರು ಪ್ರಾರ್ಥನೆ(ನಮಾಜ್) ಸಲ್ಲಿಸುತ್ತಾರೆ. ಅಲ್ಲಾನ(ದೇವನ) ಆರಾಧನೆಗಾಗಿ ದಿನಾಲು ವೈಯಕ್ತಿಕವಾಗಿ ಅಥವಾ ಸಾಮೂಹಿಕವಾಗಿ ಐದು ಸಲ ಮಸೀದಿಯಲ್ಲಿ ಪ್ರಾರ್ಥನೆ ಸಲ್ಲಿಸುವುದೇ ನಮಾಜ. ಎಂಥಹ ಕಠಿಣ ಸ್ಥಿತಿಯಲ್ಲಿಯೂ ಪ್ರಾರ್ಥನೆಯನ್ನು ತಪ್ಪಿಸಬಾರದು. ಪ್ರಾರ್ಥನಾ ಮಂದಿರಗಳು ವ್ಯಕ್ತಿಯ ದೇಹ ಆತ್ಮಗಳೆರಡನ್ನು ಈ ಪವಿತ್ರ ಸಾನಿಧ್ಯದಲ್ಲಿ ಗಟ್ಟಿಗೊಳಿಸುವ ಆಧ್ಯಾತ್ಮಿಕ ಕೇಂದ್ರವಾಗಿದೆ. ನಮಾಜ್ ಮನುಷ್ಯನ ಆತ್ಮ ದೇಹಗಳನ್ನು ಶುದ್ಧೀಕರಿಸುವುದು.

ದೇವನ(ಅಲ್ಲಾನ)ಸಾನಿಧ್ಯವನ್ನು ಪಡೆಯಬಹುದಾಗಿದೆ. ಈ ಮಸೀದಿಗಳಲ್ಲಿ ಆಚರಿಸುವ ಪದ್ದತಿಗಳನ್ನು ಈ ಕೆಳಗಿನಲ್ಲಿ ವಿವರಿಸಲಾಗಿದೆ.

**ಫಜರ(ಬೆಳಗಿನ)ಪ್ರಾರ್ಥನೆ**

ಮುಂಜಾನೆ ಐದು ಗಂಟೆಯಿಂದ ಸುರ್ಯೋದಯದವರೆಗೆ ಫಜರ ಮಾಡಲಾಗುತ್ತದೆ.

**ಜೋಹಾರ(ಮಧ್ಯಾಹ್ನ)ಪ್ರಾರ್ಥನೆ.**

ಸುಮಾರು ೧೨ ಗಂಟೆಯಿಂದ ಪ್ರಾರಂಭವಾಗಿ ನಂತರ ೧ ಗಂಟೆಯಿಂದ ೨ ಗಂಟೆಯವರೆಗೆ ಜೋಹಾರ ನಮಾಜವನ್ನು ಮಾಡಲಾಗುವುದು. ಒಬ್ಬ ಹನ್ನರೆಡು ರಕಾತ್‌ಗಳಿಂದ(ಶ್ಲೋಕ) ಕೂಡಿದ ನಮಾಜಗಳಿರುತ್ತವೆ. ಪ್ರತಿ ಶುಕ್ರವಾರ (ಜುಮ್ಮಾ) ಪ್ರಾರ್ಥನೆಯನ್ನು ಒಂದರಿಂದ ಎರಡು ಗಂಟೆವರೆಗೆ ನಾಲ್ಕು ರಕಾತ ಸುನ್ನತ ಆದ ಮೇಲೆ ಇಮಾಮರು ಕುರ್‌ಆನ್ ಪಠಣ ಮಾಡುವದರ ಮೂಲಕ ಮುಸ್ಲಿಂ ಆಚರಣೆಗಳನ್ನು ಕುರಿತು ಹಾಗೂ ಮಹಮ್ಮದ ಪೈಗಂಬರ ವಿಚಾರಗಳನ್ನು ಕುರಿತು(ಬಯಾನ್)ಪ್ರವಚನ ಮಾಡುವರು. ನಂತರ ಕೆಲವು ರಕಾತಗಳನ್ನು ಓದುವದನ್ನು ಜುಮ್ಮಾ ನಮಾಜ ಎನ್ನುವರು.

**ಅಸರ್(ಸಾಯಂಕಾಲ)ಪ್ರಾರ್ಥನೆ.**

ಸಾಯಂಕಾಲ ೪.೩೦ರಿಂದ ೫.೩೦ ಗಂಟೆಯ ಅವಧಿಯನ್ನು ಅಸರ ನಮಾಜ ಮಾಡಲಾಗುವುದು.

**ಮಗರಿಬ್(ಸೂರ್ಯಾಸ್ತ)ನಮಾಜ ಪ್ರಾರ್ಥನೆ**

ಸೂರ್ಯಾಸ್ತದ ೬:೩೦ ರಿಂದ ೭:೩೦ ರವರೆಗಿನ ಅವಧಿಯಲ್ಲಿ ಮಗರಿಜ(ಸುರ್ಯಾಸ್ತ) ನಮಾಜ ಮಾಡಲಾಗುವುದು.

**ಇಷಾ(ರಾತ್ರಿಯ)ಪ್ರಾರ್ಥನೆ.**

ರಾತ್ರಿ ೮.೩೦ ರಿಂದ ಮಧ್ಯ ರಾತ್ರಿವರೆಗಿನ ನಿಯಮದ ಅವಧಿಯಲ್ಲಿ ಇಷಾ ನಮಾಜ ಮಾಡುವರು. ಇವಲ್ಲದೆ ರಮಜಾನ ತಿಂಗಳಲ್ಲಿ ಇಷಾ ನಮಾಜನ ನಂತರ ತರಾವ್ಹೀ ನಮಾಜ ಮಾಡಲಾಗುತ್ತದೆ.[೨]

ಹೀಗೆ ದಿನಂಪ್ರತಿ ಪ್ರತಿಯೊಬ್ಬ ಮುಸ್ಲಿಂನು ದಿನಾಲು ಐದು ಬಾರಿ ಸಾಮೂಹಿವಾಗಿ ಪ್ರಾರ್ಥನೆಯನ್ನು ಆಚರಿಸುತ್ತಾರೆ. ಇನ್ನೂ ಕೆಲವು ವಿಶೇಷ ದಿನಗಳಂದು ಮಸೀದಿಗಳಲ್ಲಿ ಕೆಲವು ಹಬ್ಬಗಳನ್ನು ವಿಶೇಷವಾಗಿ ಆಚರಿಸಲ್ಪಡುತ್ತವೆ.

**ಈದ ಎ ಮಿಲಾದ ಬರಹನ ಶರೀಪ**

ಮಹಮ್ಮದರ ಜನ್ಮದಿನವಾದ ಮೂರನೇಯ ಚಂದ್ರಮಾನದ ವರ್ಷದ ರಾಭಿ ಅಲ್ ಅವಾಲ್ ತಿಂಗಳಿನ ಹನ್ನೆರಡನೇಯ ದಿನದಂದು ಈ ಹಬ್ಬವನ್ನು ಆಚರಿಸುತ್ತಾರೆ. ಹಬ್ಬದ ಹಿಂದಿನ ರಾತ್ರಿ ಮುಸ್ಲಿಂರು ತಂಡ ತಂಡವಾಗಿ ಮಸೀದಿಗಳಲ್ಲಿ ಸೇರಿ ಸಂತಸದಿಂದ ಮಹಮ್ಮದರ್ ಕಾರ್ಯಗಳನ್ನು ಶ್ಲಾಘಿಸುತ್ತಾ ಅವರು ನೀಡಿದ ಸಂದೇಶಗಳನ್ನು ಸ್ಮರಿಸಿ ಹಾಡಿ ಭಜಿಸುತ್ತಾರೆ.

**ಶಬ್ ಎ ಮಿರಾಜ್**

ಈ ಹಬ್ಬ ಚಂದ್ರಮಾನ ವರ್ಷದ ಏಳನೇಯ ತಿಂಗಳ ಇಪ್ಪತ್ತೇಳನೇಯ ರಾತ್ರಿ ಆಚರಿಸಲ್ಪಡುತ್ತದೆ. ಪ್ರವಾದಿ ಮಹಮ್ಮದರು ದೇವದೂತನೊಂದಿಗೆ ಸಂದರ್ಶಿಸಿ ಪರಮಾತ್ಮನ ದಿವ್ಯ ಜ್ಯೋತಿಯ ಸಾಕ್ಷಾತ್ಕಾರ ಮಾಡಿಕೊಂಡು ಅಪೌರುಷಯ ಪವಾಡವನ್ನು ಮಾಡದರೆಂದು ನಂಬುವ ಮುಸ್ಲಿಂರು ಈದಿನ ರಾತ್ರಿ ಮಹಮ್ಮದರನ್ನು ಪ್ರಾರ್ಥಿಸುತ್ತಾರೆ. ಇನ್ನು ಹಲವು ಮಸೀದಿ(ಪ್ರಾರ್ಥನಾ)ಮಂದಿರಗಳಲ್ಲಿ ಮುಂತಾದ ಹಬ್ಬಗಳನ್ನು ಆಚರಿಸಲಾಗುತ್ತದೆ.[೩]

**ಅಶ್ರುಖಾನಗಳಲ್ಲಿ ಕಂಡುಬರುವ ಆಚರಣೆಗಳು**

ಅದೇ ರೀತಿಯಾಗಿ ಅಶ್ರುಖಾನಗಳಲ್ಲಿ ಮೊಹರಂ ಹಬ್ಬವನ್ನು ಒಂದು ರಮ್ಯ ಕಥಾನಕ ರೂಪದಲ್ಲಿ ಉತ್ಸವವನ್ನಾಗಿ ಆಚರಿಸಲಾಗುತ್ತದೆ. ಈ ಅಶ್ರುಖಾನಗಳು ಕೇವಲ ಮೊಹರಂ ಹಬ್ಬದ ಉತ್ಸವಕ್ಕೆ ಸೀಮಿತವಾದ ಸ್ಮಾರಕಗಳು. ಈ ಹಬ್ಬವನ್ನು ಅತಿ ಸಂಭ್ರಮದಿಂದ ಇಸ್ಲಾಂರು ಮತ್ತು ಹಿಂದೂಗಳು ಸೇರಿ ಆಚರಿಸುವಂತಹ ಹಬ್ಬ. ಈ ಹಬ್ಬದ ನಿಜವಾದ ಹೆಸರು ಹಷುರಾ ಈ ದಿನ ಮೊಹರಂ ತಿಂಗಳಿನ ಹತ್ತನೇಯ ದಿನವಾಗಿದ್ದು ಹಾಗೂ ಪುಣ್ಯದಿನವೆಂದು ಮುಸ್ಲಿಂರಿಂದ ಭಾವಿಸಲ್ಪಡುತ್ತದೆ.

ಮಹಮ್ಮದರ ಮಗಳ ಮಗನಾದ ಹುಸೇನ ಆತನ ಮಕ್ಕಳು ಆಪ್ತವರ್ಗವೂ ಕರ್ಬಲಾ ಎಂಬ ಜಾಗದಲ್ಲಿ ತಮ್ಮ ವಿರೋದಿ ಗುಂಪು ಯಾಜೀದ ತಂಡದವರಿಂದ ಅಮಾನುಷವಾಗಿ ಕೊಲ್ಲಲ್ಪಟ್ಟರು. ಈ ದಿನವನ್ನು ಹುತಾತ್ಮ ಹುಸೇನರ ಆತ್ಮ ಶಾಂತಿಗಾಗಿ ಉಪವಾಸ ದಿನವಾಗಿ ಆಚರಿಸುತ್ತಾರೆ. ಪ್ರಾದೇಶಿಕತೆ ಅನುಗುಣವಾಗಿ ವಿಭಿನ್ನ ರೀತಿಯಲ್ಲಿ ಆಚರಿಸಲಾಗುತ್ತದೆ. ಮೊಹರಂ ಹಬ್ಬದ ದಿನ ಗೌರನ್ವಿತವಾದ ಆಸ್ಥಾನದಲ್ಲಿ ಹುಸೇನ ಆತನ ಮಕ್ಕಳು ಮತ್ತು ಆತನ ಆಪ್ತರ ರೂಪದಲ್ಲಿ ಡೋಲಿಗಳನ್ನು ಬಿದಿರಿನಿಂದ ಮಾಡಿದ ಕಾಲ್ಪನಿಕ ಮೂರ್ತಿಗಳನ್ನು ಮಾಡಲಾಗಿರುತ್ತದೆ. ಸಭಾಂಗಣದಲ್ಲಿ ಅಥವಾ ಆಸ್ಥಾನದ ಬೀದಿಯಲ್ಲಿ ಹುಸೇನ ಆತನ ಮಕ್ಕಳು ಆಪ್ತರು ಮೆರವಣಿಗೆ ಹೋಗುವ ಸಂಧರ್ಭವನ್ನು ಸೃಷ್ಟಿಸಿ ಇವರ ವಿರೋಧಿ ಬಣದಿಂದ ದಾಳಿ ನಡೆಸುವ ರೂಪದಲ್ಲಿ

ಜನರು ಆ ಮೆರವಣಿಗೆ ಡೋಲಿಗಳಿಗೆ ಕಲ್ಲುಗಳ ರೂಪದಲ್ಲಿ (ಕಾರಿಕ, ಬಿಸಕಿಟ್ಟು) ಇನ್ನಿತರ ವಸ್ತುಗಳನ್ನು ಎಸೆದು ಮಾರಣ ಹೋಮ ಸೃಷ್ಟಿಸಿ ಆಚರಿಸಲಾಗುತ್ತದೆ. ಹಾಗೂ ಮೆರವಣಿಗೆ ಸಂದರ್ಭದಲ್ಲಿ ಪಕೀರರು, ಹುಲಿವೇಷದಾರಿಗಳು, ಹೆಜ್ಜೆ ಕುಣಿತದವರು, ಈ ಉತ್ಸವದಲ್ಲಿ ಸಂಭ್ರಮದಿಂದ ಕುಣಿಯುತ್ತಾ (ಅಲಾಯ ಹೆಜ್ಜೆ) ಅಲಾವಿ ಕುಣಿತ ಎಂದು ಕರೆಯುತ್ತಾರೆ. ಕೆಲವು ಕಡೆ ಮರಗಾಲು ಕುಣಿತ, ಮುಳ್ಳ ಹೆಜ್ಜೆ , ಮಂಡಿ ಕೋಲಾಟ ಹರಿಗೋಲು ಮಂಡಿ, ನಂದಿ ಕೋಲಾಟ ಆಚರಿಸಲಾಗುತ್ತದೆ.

ಇದರ ಜೊತೆಗೆ ಹಾಡುಗಳನ್ನು ಹಾಡಲಾಗುತ್ತದೆ. ಮೊಹರಂ ಹಬ್ಬದಲ್ಲಿ ಪ್ರತ್ಯೇಕ ಹಾಡುಗಳನ್ನು ಹಾಡಲಾಗುತ್ತದೆ. ಮತ್ತು ಮೊಹರಂ ಹಬ್ಬದ ಹಿಂದಿನ ದಿನವು ಹಾಡಲಾಗುತ್ತದೆ. ಈ ಹಬ್ಬದಲ್ಲಿ ಭಕ್ತಿಯಿಂದ ಕೆಲವರು ಹೂ, ಊದು, ನೈವೈದ್ಯ ನೀಡುತ್ತಾರೆ. ಈ ಸಂಭ್ರಮ ಮುಗಿದ ನಂತರ ಒಂದು ಬೆಂಕಿ ಕುಂಡದಲ್ಲಿ ಚಿಕ್ಕ ಮಡಿಕೆಯನ್ನು ಇಟ್ಟು ಅದರಲ್ಲಿ ಹಾಲನ್ನು ಹಾಕಿರುತ್ತಾರೆ. ಆ ಹಾಲು ಯಾವ ದಿಕ್ಕಿಗೆ ಕುದ್ದು ಸುರಿವುದೋ ಆ ದಿಕ್ಕಿಗೆ ಮಳೆ ಬೆಳೆ ಚೆನ್ನಾಗಿ ಆಗುತ್ತದೆ ಎಂಬ ಜನರಲ್ಲಿ ಕಲ್ಪನೆ. ಈ ಹಬ್ಬವು ಹಿಂದೂ ಮುಸ್ಲಿಂ ವರ್ಗದವರು ಸೇರಿ ಸಂಭ್ರಮದಿಂದ ಆಚರಿಸುವ ವಿಶೇಷವಾದ ಹಬ್ಬ ಎನಸಿದೆ. ಕೆಲವು ಕಡೆಗಳಲ್ಲಿ ಈ ಹಬ್ಬದ ಆಚರಣೆಗೆ ಪ್ರತ್ಯೇಕವಾದ ಸ್ಮಾರಕಗಳನ್ನು ನಿರ್ಮಿಸಲಾಗಿದೆ. ಬೆಳಗಾವಿ ನಗರದಲ್ಲಿ ಸ್ಥಳಗಳಂಟು ಆದರೆ ಸ್ಮಾರಕಗಳಿಲ್ಲ. ಇದೊಂದು ದು:ಖದ ಸನ್ನಿವೇಶ ನೀಡುವ ಹಬ್ಬ ಆದ್ದರಿಂದ ಈ ಹಬ್ಬವನ್ನು ಇಸ್ಲಾಂ ವರ್ಗದವರು ಆಚರಿಸುವುದು ಕಡಿಮೆ ಹೀಗಾಗಿ ಈ ಹಬ್ಬದ ಆಚರಣೆ ಬರುಬರುತ್ತಾ ಕ್ಷೀಣಿಸುತ್ತಾ ಬರುತ್ತಿದೆ. ಹಾಗೂ ಈ ಹಬ್ಬಕ್ಕೆ ಸಂಬಂಧಿಸಿದ ಸ್ಮಾರಕಗಳು ಕೂಡಾ ಕಣ್ಮರೆಯಾಗತೊಡಗಿವೆ.

ಒಟ್ಟಿನಲ್ಲಿ ಹೀಗೆ ಇನ್ನೂ ಹಲವಾರು ಆಚರಣೆಗಳು ಉತ್ಸವಗಳು ಈ ಮೇಲಿನ ಸ್ಮಾರಕಗಳಲ್ಲಿ ಆಚರಿಸಲಾಗುತ್ತದೆ. ಈ ಹಬ್ಬಗಳು ಎರಡು ಸಂಸ್ಕೃತಿಗಳ ಸಮ್ಮಿಲನದ ಪ್ರತೀಕವೆನಿಸಿದ ಹಬ್ಬಗಳಾಗಿವೆ.

**ಅಡಿಟಿಪ್ಪಣಿಗಳು**

೧. ಕರ್ನಾಟಕದ ಸೂಫಿಗಳು, ಪು.೨೯

೨. ಕರ್ನಾಟಕದ ಉರುಸುಗಳು, ಪು.೧೨೪ರಿಂದ ೧೩೧

೩. ಕನ್ನಡ ವಿಷಯ ವಿಶ್ವಕೋಶ, ಪು.೧೨೯೫

ಅಧ್ಯಾಯ ಐದು

# ಸಮಾರೋಪ

ಬೆಳಗಾವಿ ನಗರವು ಪ್ರಾಚೀನ ಕಾಲದಿಂದಲೂ ಭವ್ಯ ಇತಿಹಾಸ ಹೊಂದಿದ ಪ್ರದೇಶವಾಗಿದೆ. ಆ ಕಾಲದಿಂದಲೂ ಈ ನಗರ ಅಸ್ತಿತ್ವದಲ್ಲಿರುವುದನ್ನು ಇಲ್ಲಿ ದೊರೆತ ಪ್ರಾಚೀನ ನೆಲೆಗಳು, ಶಾಸನಗಳು, ಹಾಗೂ ಸ್ಮಾರಕಗಳ ಅವಶೇಷಗಳಿಂದ ಗುರುತಿಸಬಹುದಾಗಿದೆ. ಈ ಅವಶೇಷಗಳ ಅಧ್ಯಯನದಿಂದ ಈ ನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವುದರೊಂದಿಗೆ ಚರಿತ್ರೆಯಲ್ಲಿ ಬಿಟ್ಟುಹೋಗಿರುವ ಕೆಲವು ಅಂಶಗಳನ್ನು ಜೋಡಿಸಲು ಸಾಧ್ಯವಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಚರಿತ್ರೆ ಅಧ್ಯಯನದ ಕ್ಷೇತ್ರ ವಿಸ್ತಾರ ರೂಪವನ್ನು ಪಡೆದಿದ್ದರಿಂದ ಸ್ಥಳೀಯ ಅಧ್ಯಯನದ ಕಡೆಗೆ ಹೆಚ್ಚಿನ ಮಹತ್ವ ನೀಡಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಬೆಳಗಾವಿ ನಗರದ ಮುಸ್ಲಿಂ ಸ್ಮಾರಕಗಳು ಎಂಬ ಶೀರ್ಷಿಕೆಯೊಂದಿಗೆ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಈ ಪ್ರದೇಶದಲ್ಲಿ ಭೌಗೋಳಿಕವಾಗಿ ಅಧಿಕ ಸಂಪನ್ಮೂಲ ಹೊಂದಿರುವ ಕಾರಣ ಆದಿ ಶಿಲಾಯುಗದಿಂದ ಇಂದಿನವರೆಗೆ ಮಾನವ ನೆಲೆಸಿದ ಕುರುಹುಗಳು ಕಂಡುಬರುತ್ತವೆ. ಇಲ್ಲಿ ದೊರೆತ ಸ್ಮಾರಕಗಳಲ್ಲಿ ವಿಶಿಷ್ಟವಾದ, ಪ್ರತ್ಯೇಕವೆನಸುವ ಮುಸ್ಲಿಂ ಸ್ಮಾರಕಗಳು ಹೆಚ್ಚಾಗಿ ಕಂಡುಬರುತ್ತವೆ. ಹೀಗಾಗಿ ಇವುಗಳ ಅಧ್ಯಯನ ಮಹತ್ವವೆನಿಸಿ ಅವುಗಳ ರಚನೆ, ಚರಿತ್ರೆ ಕುರಿತು ಅಧ್ಯಯನ ಕೈಗೊಳ್ಳಲಾಯಿತು.

ಬೆಳಗಾವಿಯಲ್ಲಿ ಭೌಗೋಳಿಕವಾಗಿ ಸಮೃದ್ಧವಾದ ಭೂ ರಚನೆ, ಸಸ್ಯವರ್ಗ ವಿಪುಲವಾಗಿ ಬೆಳೆದು ಬಂದ ಕಾರಣ ನಗರದಲ್ಲಿ ಹಿತಕರವಾದ ಹವಾಮಾನ, ಪರಿಸರ ಹಾಗೂ ಆಯಕಟ್ಟಿನ ನೆಲೆಗಳ ಹಿನ್ನೆಲೆಯಲ್ಲಿ ಹಲವು ವರ್ಗದ ಜನರು ನೆಲೆಸಲು ಕಾರಣವಾಗಿದೆ. ಇತಿಹಾಸ ಪೂರ್ವ ಕಾಲದಿಂದಲೂ ನಗರ ಅಸ್ತಿತ್ವದಲ್ಲಿರುವುದನ್ನು ಕುರುಹುಗಳು ದೃಢಪಡಿಸುತ್ತವೆ. ರಾಜಕೀಯ ಆಡಳಿತಗಾರರ ಪ್ರಭಾವದಿಂದ ನಗರ ಹಂತ ಹಂತವಾಗಿ ಬೆಳವಣಿಗೆ ಹೊಂದಿರುವುದು ಕಂಡು ಬರುತ್ತದೆ.

ಬೆಳಗಾವಿಯ ರಾಜಕೀಯ ಇತಿಹಾಸವು ಶಾತವಾಹನರಿಂದ ಪ್ರಾರಂಭಗೊಳ್ಳುತ್ತದೆ. ಅವರ ಆಡಳಿತಕ್ಕೆ ಸಂಬಂಧಿಸಿದ ಕುರುಹುಗಳು ನಗರದ ವಡಗಾಂವ ಭಾಗದಲ್ಲಿ ವಸತಿ ನೆಲೆಗಳು ದೊರೆತಿವೆ. ಕದಂಬರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಬಹುಮನಿಗಳು, ಆದಿಲ್‌ಶಾಹಿಗಳು. ಮತ್ತು ಮೊಘಲರು, ಮರಾಠರು, ಸವಣೂರ ನವಾಬರು ಹೀಗೆ ಹಲವು ಅರಸುಮನೆತನಗಳು ಕ್ರಮವಾಗಿ ಈ ಭಾಗದಲ್ಲಿ ಆಡಳಿತ ನಡೆಸಿದ ಹೆಜ್ಜೆಗುರುತುಗಳು ಕಾಣಬಹುದು. ಈ ಅರಸರಿಗೆ ನಿಷ್ಠರಾಗಿ ಆಳ್ವಿಕೆ ಮಾಡಿದ ಸಾಮಂತರು ಮತ್ತು ಸರದಾರರು ಆಳ್ವಿಕೆ ನೆಡೆಸಿರುವ ಬಗ್ಗೆ ವಿವರಗಳು ಲಭ್ಯವಾಗುತ್ತವೆ. ರಾಷ್ಟ್ರಕೂಟರ, ಕಲ್ಯಾಣ ಚಾಳುಕ್ಯರ ಕಾಲದ ಸಾಮಂತರಾದ ಸವದತ್ತಿ ರಟ್ಟರು, ಗೋವೆ ಕದಂಬರು, ದೇವಗಿರಿ ಯಾದವರ ಆಳ್ವಿಕೆಯ ಪ್ರಭಾವ ಇಲ್ಲಿ ಹೆಚ್ಚಾಗಿ ಕಂಡುಬರುತ್ತವೆ.

ರಟ್ಟರು ಬೆಳಗಾವಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆಮಾಡಿ ಈ ಪ್ರದೇಶದ ಅಭಿವೃದ್ಧಿಗೆ ಕಾರಣರಾದರು. ತರುವಾಯ ಬಹುಮನಿ, ಆದಿಲ್‌ಶಾಹಿ, ಮೊಘಲ್‌ರು, ಸವಣೂರು ನವಾಬರು, ಮರಾಠರ ಆಳ್ವಿಕೆಯ ಸಂದರ್ಭದಲ್ಲಿ ಬೆಳಗಾವಿ ಭಾಗದ ಆಡಳಿತವು ಒಬ್ಬರಿಂದ ಒಬ್ಬರಿಗೆ ಹಸ್ತಾಂತರಗೊಳ್ಳುತ್ತಾ ಸಂದಿಗ್ಧತೆಗೆ ಒಳಗಾಯಿತು. ಆದಿಲ್‌ಶಾಹಿಗಳ ಸರದಾರರಾದ ಅಸದಖಾನ ಮತ್ತು ಶೇರಖಾನ ಬೆಳಗಾವಿ ನಗರದ ಆಡಳಿತಗಾರರಲ್ಲಿ ಪ್ರಮುಖರೆನಿಸಿದ್ದಾರೆ. ಇವರ ಆಳ್ವಿಕೆ ಪ್ರಭಾವದಿಂದ ನಗರದಲ್ಲಿ ವಿಶಿಷ್ಟವಾದ ಸಂಸ್ಕೃತಿ ಬೆಳವಣಿಗೆ ಹೊಂದಿತು. ಇವರ ಆಡಳಿತದ ಅವಧಿಯಲ್ಲಿ ಅವಶ್ಯಕತೆ ಎನಿಸಿದ ಕಟ್ಟಡಗಳನ್ನು ವಿವಿಧ ವಾಸ್ತುವಿನ್ಯಾಸವನ್ನು ಅನುಸರಿಸಿ ಕೋಟೆ, ಕಛೇರಿ, ಮಹಲ್ ಮತ್ತು ದರ್ಗಾ, ಮಸೀದಿ, ಅಶ್ರುಖಾನಗಳ ರಚನೆಗಳನ್ನು ಕಾಣತ್ತೇವೆ. ಈ ಎಲ್ಲ ಸ್ಮಾರಕಗಳನ್ನು ಕ್ರೂಢಿಕರಿಸಿ ಧಾರ್ಮಿಕ ಮತ್ತು ಧಾರ್ಮಿಕೇತರ ಕಟ್ಟಡಗಳೆಂದು ವಿಭಾಗಿಸಿ ಅಧ್ಯಯನ ಕೈಗೊಳ್ಳಲಾಗಿದೆ.

ಈ ಸ್ಮಾರಕಗಳು ಹಿಂದೂ ಸ್ಮಾರಕಗಳಿಗಿಂತ ರಚನೆಯಲ್ಲಿ ವಿಭಿನ್ನವಾಗಿ, ಪ್ರತ್ಯೇಕವೆನಸುವ ರೀತಿಯಲ್ಲಿ ಆದಿಲ್‌ಶಾಹಿ ಆಡಳಿತಗಾರರು ಬೆಳಗಾವಿ ನಗರದಲ್ಲಿ ಹಲವು ಕಟ್ಟಡಗಳನ್ನು ಇಂಡೋ ಸಾರ್ಸನಿಕ್, ಆದಿಲ್‌ಶಾಹಿ ಹಾಗೂ ದಖನ್ ವಾಸ್ತುಶೈಲಿಯಲ್ಲಿ ನಿರ್ಮಿಸಿದ್ದಾರೆ. ಅವುಗಳಲ್ಲಿ ಧಾರ್ಮಿಕತೆಗೆ ಸಂಬಂಧಿಸಿದ ದರ್ಗಾ, ಮಸೀದಿ, ಆಶ್ರುಖಾನ, ಈದ್ಗಾ ಸ್ಮಾರಕಗಳನ್ನು ಅಧಿಕವಾಗಿ ನಿರ್ಮಿಸಲಾಗಿದೆ. ದರ್ಗಾಗಳು ಬೆಳಗಾವಿ ನಗರದಲ್ಲಿ ಅತಿ ಹೆಚ್ಚಾಗಿ ಕಂಡುಬರುತ್ತವೆ. ಏಕೆಂದರೆ ೧೪ನೇ ಶತಮಾನದಲ್ಲಿ ಬೆಳಗಾವಿ ಮುಸ್ಲಿಂ ಆಡಳಿತಗಾರರ ಅಧೀನಕ್ಕೆ ಒಳಪಟ್ಟ ನಂತರ ಬೆಳಗಾವಿಗೆ ಧರ್ಮ ಪ್ರಸಾರ ನಿಮಿತ್ತ ಹಲವು ಸೂಫಿಸಂತರು ಬಂದು ನೆಲೆಸಿದರು. ಸಂತರು ಆಡಳಿತಗಾರರ ಪೋಷಣೆಯಲ್ಲಿ ಧರ್ಮ ಪ್ರಸಾರ ಕಾರ್ಯದಲ್ಲಿ ತೊಡಗಿ ಸಮಾಜವನ್ನು

ಶುದ್ಧೀಕರಿಸಲು ಶ್ರಮಿಸಿ ಇಲ್ಲಿಯೇ ಅಸುನೀಗಿದರು. ಇಂತಹ ಸಂತರ ದರ್ಗಾಗಳು ಬೆಳಗಾವಿ ನಗರದಲ್ಲಿ ಕಾಣಬಹುದು. ಮತ್ತು ನಗರದ ಆಡಳಿತಗಾರರಾಗಿ ನೇಮಕಗೊಂಡ ಸರದಾರರ ಸೇವೆಯ ಪ್ರತೀಕವಾಗಿ ಜನರು ಅವರನ್ನು ಕೂಡಾ ದೈವ(ದರ್ಗಾ) ರೂಪದಲ್ಲಿ ಆರಾಧಿಸುತ್ತಾರೆ. ಉದಾ : ಅಸದಖಾನ. ಮಸೀದಿಗಳನ್ನು ಪ್ರಾರ್ಥನೆಗೊಸ್ಕರ ರಚಿಸಲಾಗುತ್ತದೆ.

ಬೆಳಗಾವಿಯಲ್ಲಿ ರಚನೆಯಾದ ದರ್ಗಾ, ಮಸೀದಿಗಳನ್ನು ಇಂಡೋ ಸಾರ್ಸನಿಕ್, ಆದಿಲ್‌ಶಾಹಿ, ಮತ್ತು ದಖ್ಖನ್, ಮೊಘಲ್ ವಾಸ್ತುಶೈಲಿಯಲ್ಲಿ ನಿರ್ಮಿಸಲಾಗಿದೆ. ಇವುಗಳಲ್ಲಿ ಕೆಲವು ಸ್ಮಾರಕಗಳು ಆಡಳಿಗಾರರ ಪೋಷಣೆಯಿಂದ ರಚನೆಗೊಂಡಿವೆ. ಇನ್ನಿತರ ಸ್ಮಾರಕಗಳಾದ ಅಶ್ರುಖಾನ ಈದ್ಗಾ ರಚನೆಗಳು ನಗರದಲ್ಲಿ ಕಂಡು ಬರುತ್ತವೆ. ಇವುಗಳನ್ನು ಹಬ್ಬದ ಆಚರನೆಗಳಿಗೊಸ್ಕರ ನಿರ್ಮಿಸಲಾಗಿದೆ. ಆಶ್ರುಖಾನ ಸ್ಮಾರಕಗಳನ್ನು ಮೊಹರಂ ಹಬ್ಬದಲ್ಲಿ ಬಳಸಲಾಗುತ್ತದೆ. ಈದ್ಗಾ ಸ್ಮಾರಕಗಳನ್ನು ರಂಜಾನ ಮತ್ತು ಬಕ್ರಿದ ಹಬ್ಬಗಳಲ್ಲಿ ಬಳಸಲಾಗುತ್ತದೆ. ಈದ್ಗಾ ಸ್ಮಾರಕಗಳು ಮುಸ್ಲಿಂ ವರ್ಗದವರ ಐಕ್ಯತೆಯ ತಾಣವಾಗಿದೆ. ಆಶ್ರುಖಾನಗಳು ಹಿಂದೂ ಮುಸ್ಲಿಂ ವರ್ಗದವರು ಸೇರಿ ಆಚರಿಸುವಂತ ಸ್ಮಾರಕವಾಗಿದೆ. ಈ ಸ್ಮಾರಕಗಳನ್ನು ವರ್ಷದ ಕೆಲವು ದಿನಗಳಲ್ಲಿ ಮಾತ್ರ ಬಳಸಲಾಗುವುದರಿಂದ ವಿನಾಶಕ್ಕೆ ಕಾರಣವಾಗುತ್ತಿವೆ. ಸಾಮಾನ್ಯ ವಾಸ್ತು ಅಳವಡಿಸಿ ಇವುಗಳನ್ನು ನಿರ್ಮಿಸಲಾಗಿದೆ. ನಂತರದ ದಿನಗಳಲ್ಲಿ ಆಶ್ರುಖಾನ ಸ್ಮಾರಕಗಳೊಂದಿಗೆ ಮೊಹರಂ ಹಬ್ಬದ ಆಚರಣೆ ಕಣ್ಮರೆಯಾಗುವ ಸಂಭವವಿದೆ. ಇಂತಹ ಐತಿಹಾಸಿಕ ಸ್ಮಾರಕಗಳ ಪ್ರದೇಶಗಳು ಜನರ ಆಕ್ರಮಣ ಪ್ರವೃತ್ತಿಗೆ ಈಡಾಗಿವೆ.

ಇನ್ನುಳಿದ ಧಾರ್ಮಿಕೇತರ ಸ್ಮಾರಕಗಳನ್ನು ಗಮನಿಸಿದಾಗ ತಮ್ಮ ಅವಶ್ಯಕತೆಯೆನಿಸಿದ ಕೋಟೆ, ಕಛೇರಿ, ಮಹಲ್, ಮನೆಗಳನ್ನು ನಿರ್ಮಿಸಿದ್ದಾರೆ. ಇವುಗಳನ್ನು ಸಾಮಾನ್ಯವಾದ ವಾಸ್ತುವನ್ನು ಅಳವಡಿಸಿ ನಿರ್ಮಿಸಲಾಗಿದೆ. ಇವುಗಳಲ್ಲಿ ಕೆಲವು ಕಟ್ಟಡಗಳು ಅವಶ್ಯವೆನಿಸಿ ಪುನರ್ ನವೀಕರಿಸಿ ಉಪಯೋಗಿಸಿದ್ದರಿಂದ ಇಂದಿಗೂ ಉಳಿದುಕೊಂಡು ಬಂದಿವೆ. ಉದಾ: ಆಶ್ರುಖಾನ, ಮನೆಗಳು, ದರ್ಬಾರ್‌ಕೊಠಡಿ, ಕೋಟೆ. ಇನ್ನು ಕೆಲವು ಸ್ಮಾರಕಗಳು ಅನುಪಯುಕ್ತವೆನಿಸಿ ಬಳಸದೇ ಇರುವುದರಿಂದ ಪ್ರಾಕೃತಿಕ ವಿಕೋಪಕ್ಕೆ ಸಿಲುಕಿ ವಿನಾಶಹೊಂದುತ್ತಿವೆ. ಉದಾ: ಸೆರಮನೆ.

ನಗರದಲ್ಲಿ ನಿರ್ಮಾಣವಾದಂತಹ ದರ್ಗಾ, ಮಸೀದಿ ಆಶ್ರುಖಾನ್. ಈದ್ಗಾ. ಸ್ಮಾರಕಗಳಲ್ಲಿ ಪರಂಪರಗತವಾಗಿ ವಿವಿಧ ಆಚರಣೆ ಉತ್ಸವಗಳನ್ನು ಆಚರಿಸುತ್ತಾ ಬಂದಿರುವುದನ್ನು ಕಾಣುತ್ತೇವೆ. ದರ್ಗಾಗಳಿಗೆ ಎಲ್ಲ ವರ್ಗದ ಜನ ಭೇಟಿ ನೀಡಿ ನಡೆದುಕೊಳ್ಳುತ್ತಾರೆ. ದರ್ಗಾಗಳು ಹಿಂದೂ ಮುಸ್ಲಿಂ ವರ್ಗದವರ ಮೇಲೆ ಧಾರ್ಮಿಕ ಹಾಗೂ ಸಾಮಾಜಿಕವಾಗಿ ಪ್ರಭಾವ ಬೀರಿದ್ದನ್ನು

ಇಲ್ಲಿ ಆಚರಿಸುವ ಸಂಪ್ರದಾಯಗಳಿಂದ ಕಂಡುಕೊಳ್ಳಬಹುದಾಗಿದೆ. ದರ್ಗಾಗಳಲ್ಲಿ ಸಂತರು ಐಕ್ಯಹೊಂದಿದ(ಪುಣ್ಯರಾಧನೆ)ನಿಮಿತ್ತ ಸುಮಾರು ಹತ್ತು ದಿನಗಳ ಕಾಲ ಉತ್ಸವ ರೂಪದಲ್ಲಿ ಉರುಸುನ್ನು ಆಚರಿಸುತ್ತಾರೆ. ಈ ಉತ್ಸವದಲ್ಲಿ ಸಂದಲ್ ಕಾರ್ಯಕ್ರಮವು ವಿಶೇಷ ರೀತಿಯಿಂದ ಕೂಡಿರುತ್ತದೆ. ಮಸೀದಿಗಳಲ್ಲಿ ವಿಶೇಷವಾಗಿ ಸಭೆ ಸಮಾರಂಭ ವಾರ್ಷಿಕೋತ್ಸವ ಕಾರ್ಯಕ್ರಮಗಳನ್ನು ಆಚರಿಸುತ್ತಾರೆ. ಅದೇ ರೀತಿಯಾಗಿ ಆಶ್ರುಖಾನ್‌ಗಳನ್ನು ಮೊಹರಂ ಹಬ್ಬದಲ್ಲಿ ಮತ್ತು ಈದ್ಗಾ ಸ್ಮಾರಕಗಳನ್ನು ಬಕ್ರಿದ್ ಮತ್ತು ರಂಜಾನ್ ಹಬ್ಬಗಳಲ್ಲಿ ಬಳಿಸಿಕೊಳ್ಳಲಾಗುತ್ತದೆ. ಮೊಹರಂ ಹಬ್ಬವನ್ನು ಹಿಂದೂ ಮುಸ್ಲಿಂ ವರ್ಗದವರು ಸೇರಿ ಆಚರಿಸುತ್ತಾರೆ. ಮುಸ್ಲಿಂ ಧರ್ಮದ ಏಳಿಗೆಯ ಕಾಲಘಟ್ಟದಲ್ಲಿ ನೆಡೆದ ಘಟನೆಯನ್ನು ನಿರೂಪಿಸುವ ಆಚರಣೆಯಾಗಿದೆ.

ಹೀಗೆ ಬೆಳಗಾವಿ ನಗರದಲ್ಲಿ ನಿರ್ಮಾಣವಾದ ಮುಸ್ಲಿಂ ಸ್ಮಾರಕಗಳು ಮಧ್ಯಕಾಲೀನ ಆಡಳಿತಗಾರರ ಅವಿಸ್ಮರಣಿಯ ಪ್ರತಿಕವಾಗಿವೆ. ಈ ಸ್ಮಾರಕಗಳ ಸಂರಕ್ಷಣೆ ಜನಸಾಮಾನ್ಯರ ಜವಾಬ್ದರಿಯಾಗಿದೆ. ಈ ಮೇಲಿನ ಅಂಶಗಳನ್ನು ಗಮನದಲ್ಲಿ ಇಟ್ಟುಕೊಂಡು ಬೆಳಗಾವಿ ನಗರದ ಮುಸ್ಲಿಂ ಸ್ಮಾರಕಗಳು ಎಂಬ ವಿಷಯದ ಅಧ್ಯಯನ ಮೂಲಕ ಈ ಕಿರು ಪ್ರಬಂಧವನ್ನು ರಚಿಸಲಾಗಿದೆ.

**ಫಲಿತಗಳು**

- ಇಲ್ಲಿಯ ಸ್ಮಾರಕಗಳು ಮಧ್ಯಕಾಲೀನ ಆಡಳಿತಗಾರರ ಕುರುಹುಗಳಾಗಿವೆ.
- ಬೆಳಗಾವಿಯು ಆದಿಲ್‌ಶಾಹಿಗಳ ಕಾಲದಲ್ಲಿ ಉಪರಾಜಧಾನಿ ಪಟ್ಟವನ್ನು ಪಡೆದಿತ್ತು.
- ದರ್ಗಾಗಳು ಹಿಂದೂ ಮುಸ್ಲಿಂ ವರ್ಗದವರ ಮೇಲೆ ಧಾರ್ಮಿಕವಾಗಿ ಮತ್ತು ಸಾಮಾಜಿಕವಾಗಿ ಪ್ರಭಾವ ಬೀರಿವೆ.
- ದರ್ಗಾಗಳ ಆಚರಣೆಯಲ್ಲಿ ಹಿಂದೂಗಳ ಪ್ರಭಾವ ಕಂಡು ಬರುತ್ತದೆ.
- ನಗರದಲ್ಲಿ ನಿರ್ಮಾಣವಾದಂತ ಸ್ಮಾರಕಗಳು ಹೆಚ್ಚಾಗಿ ಆದಿಲ್‌ಶಾಹಿಗಳ ಕಾಲದ ಸ್ಮಾರಕಗಳ ಲಕ್ಷಣಗಳನ್ನು ಹೊಲುತ್ತವೆ.
- ಇಲ್ಲಿಯ ಸ್ಮಾರಕಗಳನ್ನು ಹೆಚ್ಚಾಗಿ ಆಡಳಿತ ಅಧಿಕಾರಿಗಳು ಮತ್ತು ಸರದಾರರು ನಿರ್ಮಿಸಿ ಪ್ರೋತ್ಸಾಹಿಸಿದ್ದಾರೆ.
- ಹೆಚ್ಚಿನ ಸ್ಮಾರಕಗಳು ಜಗಲಿಯ ಮೇಲೆ ನಿರ್ಮಾಣಗೊಂಡಿವೆ.
- ಮಸೀದಿಗಳನ್ನು ಆಯತಕಾರದಲ್ಲಿ ಮತ್ತು ದರ್ಗಾಗಳನ್ನು ಚೌಕಾಕಾರದಲ್ಲಿ ಕಟ್ಟಲಾಗಿದೆ.

- ದರ್ಗಾದ ಪ್ರವೇಶ ದ್ವಾರಗಳು ಚಿಕ್ಕದಾಗಿರುತ್ತವೆ.
- ಮಸೀದಿಯ ಪ್ರವೇಶ ದ್ವಾರಗಳು ತೆರದಿರುತ್ತವೆ.
- ಚಚ್ಚಾವನ್ನು ಮಸೀದಿ ಮತ್ತು ಗೋರಿಗಳಲ್ಲಿ ಕಾಣುತ್ತೇವೆ.
- ವಿವಿಧ ರೀತಿಯ ಕಮಾನುಗಳನ್ನು ಕಟ್ಟುವ ಪದ್ದತಿ ಸ್ಮಾರಕಗಳಲ್ಲಿ ಕಾಣಬಹುದು.
- ಮಿನಾರುಗಳನ್ನು (ಸ್ತಂಭಗೋಪುರ) ಮಸೀದಿಗಳಲ್ಲಿ ಅಳವಡಿಸಿಕೊಂಡಿದ್ದಾರೆ.

ಮೇಲಿನ ಫಲಿತಗಳನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಯಿತು.

# ಗ್ರಂಥಋಣ


೧. **ಅವಲೋಕನ, ಕರ್ನಾಟಕ ಪರಂಪರೆ ಸಮೀಕ್ಷೆ,** ೧೯೮೫(ಸಂ), ಎಚ್ಚಸ್ಕೆ, ವಿಶ್ವಕನ್ನಡ ಸಾಹಿತ್ಯ ಮಾಲೆ, ಕನ್ನಡ ಮತ್ತು ಸಂಸ್ಕೃತ ಇಲಾಖೆ, ಬೆಂಗಳೂರು.

೨. **ಇಂಡೋ–ಇಸ್ಲಾಮಿಕ್ ಆರ್ಕಿಟೆಕ್ಚರ್,** ೧೯೭೦, (ಲೇ)ಜಿಯಾಯುದ್ದಿನ ದೇಸಾಯಿ, ಭಾರತ ಸರ್ಕಾರ ನವದೆಹಲಿ.

೩. **ಇತಿಹಾಸ ದರ್ಶನ,** ೧೯೯೬, ಸಂ. ೧೧.(ಸಂ) ಸೂರ್ಯನಾಥ ಕಾಮತ್, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

೪. **ಕನ್ನಡ ವಿಷಯ ವಿಶ್ವಕೋಶ,** ಸಂಪುಟ ೨, ೨೦೦೭ ಪ್ರಸಾರಾಂಗ, ಮಾನಸ ಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೫. **ಕರ್ನಾಟಕದ ಇತಿಹಾಸ ದರ್ಶನ,** ೧೯೭೦(ಸಂ)ಎಂ.ವಿ.ಕೃಷ್ಣರಾವ್. ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಚಾಮರಾಜಪೇಟ. ಬೆಂಗಳೂರ.

೬. **ಕರ್ನಾಟಕದ ಉರುಸುಗಳು,** ಲೇ.ಇಬ್ರಾಹಿಂ ಎಂ ಮುಲ್ಲಾ. ೨೦೦೭–೦೮, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. **ಕರ್ನಾಟಕದ ಕಲೆಗಳು,** ೧೯೮೬(ಸಂ)ತಿಪ್ಪೇಸ್ವಾಮಿ.ಜಿ. ಸಂಪುಟ ೧೦ ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು

೮. **ಕರ್ನಾಟಕ ಚರಿತ್ರೆ ಸಂಪುಟ ನಾಲ್ಕು,** ೧೯೯೭, ಬಿ.ಷೇಕ್‌ಅಲಿ(ಸಂ), ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯. **ಕರ್ನಾಟಕದ ಪರ್ಶಿಯನ್, ಅರೆಬಿಕ್ ಮತ್ತು ಉರ್ದು ಶಾಸನಗಳು,** ೨೦೦೧(ಸಂ)ಕ್ಯೂದ್ಸೊಸಿ ಯಾಸೀನ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. **ಕರ್ನಾಟಕದ ಸೂಫಿಗಳು,** ೨೦೦೧,(ಲೇ)ರಹಮತ ತರೀಕೆರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ. ಹಂಪಿ.

೧೧. **ಗ್ಯಾಸೆಟಿಯರ್,** ವೆಂಕಟರಂಗೊಕಟ್ಟಿ(ಸಂ), ೧೮೯೩, ಏಶಿಯನ್ ಎಜುಕೇಷನ ಸರ್ವಿಸ, ನವದೆಹಲಿ.

೧೨. **ನನ್ನ ಬೆಳಗಾವಿ,** ೧೯೯೬,(ಲೇ) ಬಾಗೋಜಿ ಪ್ರಹ್ಲಾದರಾವ್, ಅಮೋಘ ವಾಙ್ಮಯ ಪ್ರಸಾರ. ಬೆಳಗಾವಿ,

೧೩. **ನೇಗಿನಹಾಳ ಪ್ರಬಂಧಗಳು,** ೧೯೯೯,(ಲೇ) ನೇಗಿನಹಾಳ ಎಂ.ಬಿ., ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪. **ಬಾದಾಮಿ ಸಾಂಸ್ಕೃತಿಕ ಅಧ್ಯಯನ,** ೨೦೦೦(ಲೇ), ಶಿಲಾಕಾಂತ ಪತ್ತಾರ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೫. **ಬುಸಾತಿನೆ ಸಲಾತಿನೆ,** ೧೯೯೯(ಲೇ) ಕೃಷ್ಣ ಕೊಲ್ಹಾರ ಕುಲಕರ್ಣಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬. **ಬೆಳಗಾವಿ ಕಾ ಆಯನಾಮೆ,** ೨೦೧೦(ಲೇ) ಅಯನ ಖಾನಾಪುರೆ, ಓಮೇಗಾ ಪ್ರೆಸ್, ಶೆಟ್ಟಿ ಗಲ್ಲಿ, ಬೆಳಗಾವಿ

೧೭. **ಬೆಳಗಾವಿ ಗ್ಯಾಸೆಟಿಯರ್,** ೧೯೮೬, ಸೂರ್ಯನಾಥ ಕಾಮತ್(ಸಂ), ಕರ್ನಾಟಕ ಸರ್ಕಾರ, ಬೆಂಗಳೂರು.

೧೮. **ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ೨೦೧೦, ಗೋಪಾಲ ಆರ್(ಸಂ), ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

೧೯. **ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ೨೦೧೦, ಗೋಪಾಲ ಆರ್.(ಸಂ), ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

೨೦. **ಬೆಳಗಾವಿ ಭೂಗೋಳ,** ೨೦೦೮(ಲೇ) ಹುಟಗಿ ರಾಮಚಂದ್ರ, ಅಭಿನಂದನಾ ಪ್ರಕಾಶನ, ಬೆಳಗಾವಿ.

೨೧. **ಬೆಳಗಾವಿ ವಾಸ್ತುಶಿಲ್ಪ ನಿಧಿ,** ೨೦೧೩(ಲೇ),ಸ್ಮಿತಾ ಸುರೇಬಾನಕರ, ಬೆಳಗಾವಿ ಜಿಲ್ಲಾ ಸಾಹಿತ್ಯ ಪರಿಷತ್

೨೨. **ಬೆಳಗಾವಿ: ಸಾಂಸ್ಕೃತಿಕ ಅಧ್ಯಯನ,** ೨೦೧೨. ರವೀಂದ್ರ ಚಿಕ್ಕಮಠ. ಅಪ್ರಕಟಿತ ಪಿಎಚ್‌ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೩. **ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ,** ೧೯೯೫(ಲೇ), ಶಿ.ಬಾ.ಪಾಟೀಲ, ಬಸವಶ್ರೀ ಪ್ರಕಾಶನ, ಸಂಕೇಶ್ವರ.

೨೪. **ವಿಜಾಪುರದ ಆದಿಲ್‌ಷಾಹಿಗಳು,** ೨೦೦೨(ಲೇ)ಕೃಷ್ಣ ಕೊಲ್ಹಾರ ಕುಲಕರ್ಣಿ, ಸಿಕ್ಯಾಬ್ ಆದಿಲ್‌ಷಾಹಿ ಅಧ್ಯಯನ ಸಂಸ್ಥೆ, ವಿಜಾಪುರ.

೨೫. **ಸವಣೂರ ನವಾಬರು,** ೧೯೯೯, ಗೋವಿಂದಮೂರ್ತಿ ದೇಸಾಯಿ. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಸಂಸ್ಮರಣ ಸಂಪುಟಗಳು**

೧. **ಬೆಳಗಾವಿ ಬೆಳಕು,** ಗುಂಜಾಳ ಎಸ್. ಆರ್, (ಸಂ.,), ಅಖಿಲ ಭಾರತ ೭೦ನೇ ಕನ್ನಡ ಸಾಹಿತ್ಯ ಸಮ್ಮೇಳನ ಬೆಳಗಾವಿ, ೨೦೦೩.

೨. **ಬೆಳಗಾವಿ ವೇಣುವಾದ,** ಅಖಿಲ ಭಾರತ ೫೭ನೇ ಕನ್ನಡ ಸಾಹಿತ್ಯ ಸಮ್ಮೇಳನ ಬೆಳಗಾವಿ, ವಿಶೇಷ ಸಂಪುಟ, ಅಖಿಲ ಭಾರತ ೫೭ನೇ ಕನ್ನಡ ಸಾಹಿತ್ಯ ಸಮ್ಮೇಳನ ಬೆಳಗಾವಿ, ೧೯೮೦

೩. **ಬೆಳಗಾವಿ ಸಂಸ್ಕೃತಿ,** ಸರಜೂ ಕಾಟ್ಕರ್(ಸಂ), ವಿಶ್ವ ಕನ್ನಡ ಸಾಹಿತ್ಯ ಸಮ್ಮೇಳನ ಸಂಪುಟ ೧, ಬೆಳಂದಿಗಳ ಪ್ರಕಾಶನ, ಬೆಳಗಾವಿ, ೨೦೧೧.

೪. **ಸಿರಿ ಸಂಸ್ಮರಣ ಸಂಪುಟ,** ಅಖಿಲ ಭಾರತ ೭೦ನೇ ಕನ್ನಡ ಸಾಹಿತ್ಯ ಸಮ್ಮೇಳನ ಬೆಳಗಾವಿ, ಅಖಿಲ ಭಾರತ ೭೦ನೇ ಕನ್ನಡ ಸಾಹಿತ್ಯ ಸಮ್ಮೇಳನ ಬೆಳಗಾವಿ, ೨೦೦೩.

೫. **ವೇಣು ಸಂಪದ,** ಬೆಳಗಾವಿ ತಾಲೂಕ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ.ಸ್ಮರಣ ಸಂಪುಟ, ೧೯೯೭.

# ಬೆಳಗಾವಿ ತಾಲೂಕ ನಕ್ಷೆ






# ಛಾಯಾಚಿತ್ರಗಳ ವಿವರಣೆ

೧. ಹಜರತ ಸಯ್ಯದ್ಧಿನ ಶಹಾ ಬದ್ರುದ್ದೀನ ಚಿಸ್ತಿ ದರ್ಗಾ
೨. ಕೋಟೆ ಆವರಣದಲ್ಲಿರುವ ಪೀರ ಸಿಕ್ಕಂದರ ಶಾವಲಿ ದರ್ಗಾ
೩. ಅಬ್ದುಲ್ ರೆಹಮಾನಖಾನ ರೆಹಮತವುಲ್ಲಾ ಅಲ್ಯೆ ಶೇರಖಾನ್ ದರ್ಗಾ
೪. ಕೈಸರ ಶಾವಲಿ ದರ್ಗಾ
೫. ಪೀರ ಸಯ್ಯದ ಉಮರ ಇದ್ರುದ ಬಾಷಾಬನ ದರ್ಗಾ
೬. ಅಬ್ದಾಲ ಶಾವಲಿ ದರ್ಗಾ
೭. ಹಜರತ್ ಸಯ್ಯದ್ ಹಸನ್ ಮುರಾದ ಶಾ ವಲಿ ಉರ್ಫ ಖಾದ್ರಿ ದರ್ಗಾ
೮. ಲಾಲ ಶಾವಲಿ ದರ್ಗಾ
೯. ಜುಮ್ಮಾ ಶಾವಲಿ ಬಾಬಾ ಉರ್ಫ ಪಂಜಿಬಾಬಾ
೧೦. ಹಜರತ್ ಪೀರ ಅಸದಖಾನ ಲ್ಹಾರಿ ದರ್ಗಾ
೧೧. ಹಜರತ ಯೂಸೂಪ್ ಖತಾಲ ಜಂಜಾನಿ ದರ್ಗಾ
೧೨. ಹಜರತ್ ಸಯ್ಯದ ನಿಜಾಮುದ್ಧಿನ ಔಲಿಯಾ ದರ್ಗಾ
೧೩. ಸಫಾ ಈ ಮಸೀದಿ
೧೪. ಸಫಾ ಈ ಮಸೀದಿಯಲ್ಲಿಯ ಸ್ತಂಭ ಶಾಸನಗಳು
೧೫. ಜಾಮೀಯ ಮಸೀದಿ
೧೬. ಅಬ್ದುಲ್ ರೆಹಮಾನಖಾನ ರೆಹಮತವುಲ್ಲಾ ಅಲ್ಯೆ ಶೇರಖಾನ್ ಮಸೀದಿ
೧೭. ಬಾಷಿಬನ ಮಸೀದಿ
೧೮. ಜೋಡ ಗುಮ್ಮಟ ಮಸೀದಿ
೧೯. ಅಬ್ದುಲ್ ಶಾ ಮಸೀದಿ
೨೦. ಯಮನಾಪೂರ ಜುಮ್ಮಾ ಮಸೀದಿ
೨೧. ಶಾಹಿ ಮಸೀದಿ
೨೨. ಶೇರಖಾನ ಮಸೀದಿ ಶಹಪುರ
೨೩. ಈದ್ಗಾ ಮೈದಾನ ವಡಗಾವಿ
೨೪. ಈದ್ಗಾ ಮೈದಾನ. ರೈಲ್ವೆ ನಿಲ್ದಾಣದ ಹತ್ತಿರ

೨೫. ಹಜರತ್ ಸಯ್ಯದ ನಿಜಾಮುದ್ಧಿನ ಔಲಿಯಾವರ ಅನುಯಾಯಿಗಳ ಸಮಾಧಿಗಳು

೨೬. ಔರಂಗ್‌ಜೇಬನ ಸ್ವಹಸ್ತದಿಂದ ಬರೆದ ಕುರ್‌ಆನ್ ಗ್ರಂಥ

೨೭. ಬಾಷಿಬನ ವಂಶಸ್ಥರು

೨೮. ದರ್ಗಾದಲ್ಲಿ ಬಳಸುತ್ತಿರುವ ನಗಾರಿ

೨೯. ಹಜರತ್ ಸಯ್ಯದ ನಿಜಾಮುದ್ಧಿನ ಔಲಿಯಾ ದರ್ಗಾದ ಆವರಣದಲ್ಲಿ ಇರುವ ಪರ್ಷಿಯನ್ ಶಾಸನ

೩೦. ಬೆಳಗಾವಿ ನಗರದ ಮುಖ್ಯ ಕೋಟೆ

೩೧. ಯಳ್ಳೂರಗಡ ಕೋಟೆ. (ರಾಜಹಂಸ ಕೋಟೆ)

೩೨. ಕೋಟೆ ಆವರಣದಲ್ಲಿರುವ ಮಹಲ್‌ನ ದ್ವಾರಬಾಗಿಲು

೩೩. ಬೆಳಗಾವಿ ನಗರದ ಮುಖ್ಯ ಕೋಟೆಯ ಪಶ್ಚಿಮದ ದ್ವಾರಬಾಗಿಲು

೩೪. ಕಿಶ್ವರ್‌ಖಾನ್‌ನಿಂದ ರಚಿತವಾದ ಸೆರಮನೆ

೩೫. ದರ್ಗಾಗಳ ಆರಾಧನೆಗೆ ಬಳಸುವ ಸಾಮಾಗ್ರಿಗಳು

೩೬. ಹಜರತ ಸಯ್ಯದ್ಧಿನ ಶಹಾ ಬದ್ರುದ್ದೀನ ಚಿಸ್ತಿ ದರ್ಗಾದ ಸಂಧಲ್ ಕಾರ್ಯಕ್ರಮದ ಮೆರವಣಿಗೆ



ಛಾಯಾಚಿತ್ರ-೧೩



ಛಾಯಾಚಿತ್ರ-೧೫



ಛಾಯಾಚಿತ್ರ-೧೪




ಛಾಯಾಚಿತ್ರ-೧೬



ಛಾಯಾಚಿತ್ರ-೧೭



ಛಾಯಾಚಿತ್ರ-೧೮



ಛಾಯಾಚಿತ್ರ-೧೬



ಛಾಯಾಚಿತ್ರ-೧೭



ಛಾಯಾಚಿತ್ರ-೧೮



ಛಾಯಾಚಿತ್ರ-೧೯

